# ಹವಳದ ದ್ವೀಪ

(ಬಾಲಂಟೈನ್ ಅವರ ಕಥೆಯ ಅನುವಾದ)

ಎ. ಎನ್. ಮೂರ್ತಿರಾವ್



ಪ್ರಕಾಶಕರು :

ಕಾವ್ಯಾಲಯ

ಮೈಸೂರು

ಮೊದಲನೆಯ ಮುದ್ರಣ—೧೯೪೭





**ಬೆಲೆ, ರೂ. ೧–೮–೦**

ಮುದ್ರಣಕಾರರು :

ಜಿ. ಎಚ್. ರಾಮರಾವ್, ಬಿ.ಎಸ್‌ಸಿ.

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

# ಅರಿಕೆ

ಕನ್ನಡದಲ್ಲಿ ಬಾಲಕರ ಮನಸ್ಸನ್ನು ಸೆಳೆಯುವಂಥ ಪ್ರಯಾಣದ ಮತ್ತು ಸಾಹಸಕೃತ್ಯಗಳ ಕಥೆಪುಸ್ತಕಗಳು ಬಹಳ ವಿರಳ. ಈ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ನಿವಾರಣೆಮಾಡುವುದೇ ಈ ಪ್ರಯತ್ನದ ಉದ್ದೇಶ. ಇಂಗ್ಲಿಷ್ ಸಾಹಿತ್ಯದಲ್ಲಿ ಇಂಥ ಕಾವ್ಯಗಳು ಹೇರಳವಾಗಿವೆ. ಅವುಗಳಲ್ಲಿ ಒಂದನ್ನು ಮಾದರಿಗಾಗಿ ಇಲ್ಲಿ ಕನ್ನಡಿಸಿದ್ದೇನೆ. ಈ ಬಗೆಯ ಪುಸ್ತಕಗಳನ್ನು ಬರೆದವರಲ್ಲಿ ಆರ್. ಎಂ. ಬಾಲಂಟೈನ್ (1825–1894) ಅವರು ಪ್ರಸಿದ್ಧರು. ಹುಡುಗರಿಗಾಗಿ ಪುಸ್ತಕಗಳನ್ನು ಬರೆಯುವುದೇ ಅವರ ಉದ್ಯೋಗ. ಅವರ " The Coral Island " ಎಂಬ ಕಾದಂಬರಿ ನಾನು ಹುಡುಗನಾಗಿದ್ದಾಗ ಓದಿ ಮೆಚ್ಚಿದ್ದು ; ಮೂರು ಜನ ಹುಡುಗರು ಹಡಗಿನಲ್ಲಿ ಪ್ರಯಾಣ ಹೊರಟು, ನಿರ್ಜನವಾದ ದ್ವೀಪದಲ್ಲಿ ಸಿಕ್ಕಿಬಿದ್ದು, ಅಲ್ಲಿಯೇ ಸ್ವಲ್ಪ ಕಾಲ ಜೀವನ ನಡೆಸಿದ ಕಥೆ. ಇದರಲ್ಲಿ ವಿಜಾತೀಯವಾದ ಹೆಸರುಗಳು ಹೆಚ್ಚಾಗಿಲ್ಲ ; ಹುಡುಗರಿಗೆ ಕಷ್ಟಕೊಡುವ ವಿದೇಶ ಪದ್ಧತಿಗಳ ವರ್ಣನೆಯಂತೂ ಇಲ್ಲವೇಇಲ್ಲ. ಆದ್ದರಿಂದ ಹೆಚ್ಚು ಬದಲಾವಣೆ ಮಾಡದೆ ಮೂಲವನ್ನು ಸಂಗ್ರಹಿಸುವುದು ಸಾಧ್ಯವಾಯಿತು. ಮೂಲದ ಕೊನೆಯ ಭಾಗದಲ್ಲಿದ್ದ ಮತಪ್ರಚಾರದ ಛಾಯೆಯನ್ನು ಇಲ್ಲಿ ತೆಗೆದುಹಾಕಿ, ಪುಸ್ತಕವು ಸಂಪೂರ್ಣವಾಗಿ ಸಾಹಸಕೃತ್ಯಗಳ ಮತ್ತು ವಿಚಿತ್ರಾನುಭವಗಳ ಕಥೆಯಾಗುವಂತೆ ಮಾಡಿದೆ.

**ಎ. ಎನ್. ಮೂರ್ತಿರಾವ್.**

## ಈ ಲೇಖಕರ ಇತರ ಕೃತಿಗಳು

---

ಆಷಾಢಭೂತಿ

ಹಗಲುಗನಸುಗಳು

ಸಾಕ್ರೆಟೀಸನ ಕೊನೆಯ ದಿನಗಳು

ಯೋಧನ ಪುನರಾಗಮನ ಮತ್ತು ಇತರ ಕಥೆಗಳು

# ಹವಳದ ದ್ವೀಪ

## ೧

## ಹಡಗಿನ ಅನಾಹುತ

ನಾನು ಚಿಕ್ಕ ಮಗುವಾಗಿದ್ದಾಗಿನಿಂದ ದೇಶಸಂಚಾರವೆಂದರೆ ನನಗೆ ಪಂಚಪ್ರಾಣ. ಇಂದಿಗೂ ಎಲ್ಲಿಗಾದರೂ ಪ್ರಯಾಣಹೊರಡುವುದೆಂದರೆ ನನ್ನ ಹೃದಯ ಉಬ್ಬುತ್ತದೆ. ಹುಡುಗನಾಗಿದ್ದಾಗ ನಮ್ಮ ಊರಿನ ಬಳಿ ಇದ್ದ ಕಾಡುಮೇಡುಗಳಲ್ಲಿಯೂ ಬೆಟ್ಟಗುಡ್ಡಗಳಲ್ಲಿಯೂ ಸ್ವೇಚ್ಛೆಯಾಗಿ ತಿರುಗುತ್ತಿದ್ದೆ. ಅದರಿಂದ ನನ್ನ ಅಲೆದಾಟದ ಆಸೆ ತಣಿಯುವುದಕ್ಕೆ ಬದಲು, ಇಡೀ ಪ್ರಪಂಚವನ್ನೇ ಸುತ್ತುವರಿಯಬೇಕೆಂಬ ಹೆಬ್ಬಯಕೆ ಮನಸ್ಸಿನಲ್ಲಿ ಮನೆಮಾಡಿಕೊಂಡಿತು. ನಾನು ಹುಟ್ಟಿದ ಮುಹೂರ್ತವೇ ಅಂಥಾದ್ದಿರಬಹುದು. ನಾನು ಮೊದಲು ಕಣ್ಣು ತೆರೆದದ್ದು ಅಟ್ಲಾಂಟಿಕ್ ಸಾಗರದ ಮಧ್ಯದಲ್ಲಿ. ಆ ರಾತ್ರಿ ಭಯಂಕರವಾದ ಬಿರುಗಾಳಿ ಊಳಿಟ್ಟು ರೊಯ್ಯನೆ ಬೀಸುತ್ತಿತ್ತು. ಬೆಟ್ಟದಂಥ ಅಲೆಗಳು ನೊರೆನೊರೆಯಾಗಿ ಅಪ್ಪಳಿಸುತ್ತಿದ್ದವು. ಗಾಳಿ ಮತ್ತು ಅಲೆಗಳ ರೋಷವನ್ನು ಲೆಕ್ಕಿಸದೆ ಮುಂದೆ ಸಾಗುತ್ತಿದ್ದ ಹಡಗಿನ ಮೇಲೆ, ನಾನು ಹುಟ್ಟಿದ್ದು. ನಮ್ಮ ತಂದೆ ದೊಡ್ಡದೊಂದು ಹಡಗಿನ ಕ್ಯಾಪ್ಟನ್; ನನ್ನ ಅಜ್ಜ ಮುತ್ತಜ್ಜರೂ ಹಾಗೆಯೇ. ತಾಯಿಯ ಮನೆತನದಲ್ಲಿ ಸಹ ಎಲ್ಲರೂ ದೇಶ ಸುತ್ತಿದವರು. ನಮ್ಮ ತಂದೆ ಹಡಗು ಹತ್ತಿದಾಗಲೆಲ್ಲ—ಅದು ಎಷ್ಟು ದೂರದ ಪ್ರಯಾಣವಾಗಲಿ, ಎಷ್ಟೇ ಅಪಾಯಕರವಾದದ್ದಾಗಲಿ—ತಾಯಿಯೂ ಜೊತೆಯಲ್ಲೇ ಹೊರಡುವ ಪದ್ಧತಿ. ಆದ್ದರಿಂದ ಈ ಪ್ರಯಾಣದ ಹುಚ್ಚು ನನಗೆ ವಂಶಪಾರಂಪರ್ಯವಾಗಿ ಬಂದ ಗುಣವೆನ್ನಬಹುದು. ನನ್ನ ಹೆಸರು ರಾಲ್ಫ್; ಅದರೆ ನನ್ನ ಸ್ನೇಹಿತರೆಲ್ಲ ನನ್ನನ್ನು 'ರೋವರ್' ಎಂದು ಕರೆಯುತ್ತಿದ್ದರು. ರೋವರ್ ಎಂದರೆ ಅಲೆದಾಡುವವನು ಎಂದರ್ಥ. ಆ ಹೆಸರು ನನ್ನ ಸ್ವಭಾವಕ್ಕೆ ಚೆನ್ನಾಗಿ ಹೊಂದುವು

ದಾದ್ದರಿಂದ ನಾಮಕರಣದ ಹೆಸರು ಮರೆತುಹೋಗಿ ನನಗೆ ಆ ಹೆಸರೇ ಸ್ಥಿರವಾಗಿ ನಿಂತುಹೋಯಿತು.

ಬುದ್ಧಿ ತಿಳಿದ ಮೇಲೆ ನಾನು ಮೊದಲು ಸಮುದ್ರಯಾನಕ್ಕೆ ಹೊರಟದ್ದೆಂದರೆ ನನಗೆ ಹನ್ನೆರಡು ವರ್ಷ ತುಂಬಿದಾಗ. ನಾವಿಕನ ಕೆಲಸವನ್ನು ಕಲಿಯಲೆಂದು ನನ್ನನ್ನು ತೀರಪ್ರದೇಶದ ಹಡಗೊಂದರಲ್ಲಿ ನೌಕರಿಗೆ ಸೇರಿಸಿದ್ದರು. ಕೆಲವು ವರ್ಷಕಾಲ ಬಂದರಿನಿಂದ ಬಂದರಿಗೆ ತಿರುಗಿ ನಮ್ಮ ದೇಶದ ಕರಾವಳಿಯ ಪರಿಚಯಮಾಡಿಕೊಂಡು ಸುಖವಾಗಿ ಕಾಲ ಕಳೆದರೂ ನನ್ನ ಹುಟ್ಟಿಗೆ ಬಂದ ಆಸೆಯೇನೋ ಮೊದಲಿನಂತೆಯೇ ಬಲವಾಗಿತ್ತು. ಜೊತೆಗೆ ಪ್ರಪಂಚದ ಮೂಲೆಮೂಲೆಗಳಲ್ಲೆಲ್ಲಾ ಸುತ್ತಿ ದೂರದೇಶಗಳನ್ನು ನೋಡಿಕೊಂಡು ಬಂದ ನಾವಿಕರ ಪರಿಚಯವಾಯಿತು. ತಾವು ನೋಡಿದ ಸ್ಥಳಗಳ ಸೊಬಗನ್ನೂ ತಮ್ಮ ಸಾಹಸಕೃತ್ಯಗಳನ್ನೂ ವಿಚಿತ್ರ ಅನುಭವಗಳನ್ನೂ ಅವರು ಬಣ್ಣಿಸಿದಾಗ ನಾನು ಎರಡು ಕಿವಿ ಸಾಲದೆನ್ನುವಷ್ಟು ಉತ್ಸಾಹದಿಂದ ಕೇಳುತ್ತಿದ್ದೆ. ಅವರಂತೆಯೇ ನಾನೂ ಸಹ ಸಾಹಸಕೃತ್ಯಗಳನ್ನು ಮಾಡಿ ವಿಶಾಲವಾದ ಅನುಭವ ಪಡೆಯಬೇಕೆಂದು ಮನಸ್ಸು ಹಾತೊರೆಯುತ್ತಿತ್ತು. ಅವರು ಹೇಳಿದ ಕಥೆಗಳೆಲ್ಲಕ್ಕಿಂತಲೂ ಹೆಚ್ಚಾಗಿ ಹವಳದ ದ್ವೀಪಗಳ ವರ್ಣನೆ ನನ್ನ ಮನಸ್ಸನ್ನು ಸೆಳೆಯಿತು. ಅವುಗಳ ಹುಟ್ಟಿನ ಕಥೆಯೇ ನಂಬಲಾರದಷ್ಟು ಆಶ್ಚರ್ಯಕರವಾಗಿದೆ. ದಕ್ಷಿಣ ಸಾಗರದಲ್ಲಿರುವ ಸೂಕ್ಷ್ಮವಾದ ಹವಳದ ಕ್ರಿಮಿಗಳು ಹಗಲು ರಾತ್ರಿ ದುಡಿದು ಅಂಥ ಸಾವಿರಾರು ದ್ವೀಪಗಳನ್ನು ನಿರ್ಮಿಸಿವೆಯಂತೆ. ಆ ವಲಯದಲ್ಲಿ ವರ್ಷವೆಲ್ಲಾ ವಸಂತಕಾಲವೇ. ಎಲ್ಲಾ ಋತುಗಳಲ್ಲಿಯೂ ಚೆನ್ನಾಗಿ ಮಾಗಿ ರಸವತ್ತಾದ ಹಣ್ಣುಗಳ ಭಾರದಿಂದ ಮರಗಳ ಕೊಂಬೆಗಳು ಬಾಗಿರುವುವಂತೆ. ಹವಾಗುಣ ಸದಾ ಹಿತಕರವಾಗಿರುವುದು. ಆದರೆ ಪ್ರಕೃತಿ ಇಷ್ಟು ದಯೆ ತೋರಿದರೂ ಅಲ್ಲಿಯ ಜನರು ಮಾತ್ರ ಕೇವಲ ಅನಾಗರಿಕರಾದ ಕಾಡುಜನರು. ಒಬ್ಬರನ್ನೊಬ್ಬರು ಕೊಂದುಹಾಕಿ ರಕ್ತ ಚೆಲ್ಲುವುದೇ ಅವರ ದಿನಗೆಲಸ. ಎಲ್ಲೋ ಒಂದೆರಡು ದ್ವೀಪಗಳಲ್ಲಿ ಮಾತ್ರ ಸ್ವಲ್ಪ ನಾಗರಿಕತೆ ಹಬ್ಬಿದೆಯಂತೆ. ಅಲ್ಲಿಯ ಕಥೆಗಳನ್ನು ಕೇಳಿ

ನಾನೂ ಅಲ್ಲಿ ಪ್ರವಾಸಮಾಡಬೇಕೆಂಬ ಬಯಕೆ ಹೆಚ್ಚಾಯಿತು. ನನಗಿನ್ನೂ ಹದಿನೈದು ವರ್ಷವಾಗಿದ್ದಾಗಲೇ ದಕ್ಷಿಣಸಾಗರದಲ್ಲಿ ಪ್ರಯಾಣ ಮಾಡಬೇಕೆಂದು ನಿಶ್ಚಯಿಸಿದೆ.

ನಾನು ಅಷ್ಟು ದೂರದ ಪ್ರಯಾಣವನ್ನು ಕೈಕೊಳ್ಳುವುದೆಂದರೆ ನನ್ನ ತಂದೆ ತಾಯಿಗಳಿಗೆ ಇಷ್ಟವಿಲ್ಲ. ಅವರ ಒಪ್ಪಿಗೆ ಪಡೆಯುವುದು ಬಹಳ ಕಷ್ಟವೇ ಆಯಿತು. ಕೊನೆಗೆ ನಾನು "ಜೀವಮಾನವೆಲ್ಲಾ ಕರಾವಳಿಯಲ್ಲೇ ಓಡಾಡುತ್ತಿದ್ದರೆ ನೀನು ತಾನೆ ಪ್ರಸಿದ್ಧನಾದ ಕ್ಯಾಪ್ಟನ್ ಆಗುತ್ತಿದ್ದೆಯಾ?" ಎಂದು ತಂದೆಗೆ ಪ್ರಶ್ನೆ ಹಾಕಿದೆ. ನಾನು ಹೇಳಿದ್ದು ನ್ಯಾಯವೆಂದೂ ಹುಡುಗರನ್ನು ಧೈರ್ಯ ಸಾಹಸಗಳಿಗೆ ಹುರಿದುಂಬಿಸಬೇಕೆಂದೂ ಅವರಿಗೂ ತೋರಿ ನನ್ನನ್ನು ಕಳುಹಿಸಲು ಒಪ್ಪಿದರು. ಆ ಸಮಯದಲ್ಲಿ ಅವರ ಹಳೆಯ ಸ್ನೇಹಿತನಾದ ಕ್ಯಾಪ್ಟನ್ ಒಬ್ಬನು ದಕ್ಷಿಣ ಸಾಗರಕ್ಕೆ ಹೊರಟಿದ್ದನು. "ನಮ್ಮ ಹುಡುಗನ ಯೋಗಕ್ಷೇಮವನ್ನು ಚೆನ್ನಾಗಿ ನೋಡಿಕೊ" ಎಂದು ಹೇಳಿ ನನ್ನನ್ನು ಆತನ ವಶಕ್ಕೆ ಒಪ್ಪಿಸಿದ್ದಾಯಿತು.

ಹೊರಡುವ ದಿನ ಬಂತು. ಮೋಡದ ಸೊಂಕೇ ಇಲ್ಲದೆ ಆಕಾಶವೆಲ್ಲಾ ಶುಭ್ರವಾದ ನೀಲಿಯಾಗಿ, ಸೂರ್ಯನ ಬೆಳಕು ಸುಖೋಷ್ಣವಾಗಿ ಹರಡಿತ್ತು. "ಹಡಗು ಹೊರಡಲಿ" ಎಂದು ಕ್ಯಾಪ್ಟನ್ ಅಪ್ಪಣೆ ಮಾಡಿದೊಡನೆಯೇ ನಾವಿಕರು ಲಂಗರನ್ನು ಎತ್ತಿ ಪಟಗಳನ್ನು ಏರಿಸಿದರು. ಗಾಳಿ ತುಂಬಿಬಂದು ಹಡಗು ಮೆಲ್ಲನೆ ಹೊರಟಿತು. ನಾನು ಮೇಲಟ್ಟದ ಮೇಲೆ ನಿಂತು ನೋಡುತ್ತಿದ್ದ ಹಾಗೆಯೇ ಇಂಗ್ಲೆಂಡಿನ ತೀರ ಹಿಂದಕ್ಕೆ ಸರಿಯುತ್ತಾ ಬಂದು ಕೊನೆಗೆ ಕಣ್ಮರೆಯಾಯಿತು. ನನ್ನ ಸಂತೋಷ ಅಷ್ಟಿಷ್ಟಲ್ಲ; ನನ್ನ ಭಾಗಕ್ಕೆ ಹಡಗಿನ ಪ್ರಯಾಣವು ಒಂದು ಸವಿಗನಸು.

ಹಡಗಿನಲ್ಲಿ ನನ್ನಂಥ ಹುಡುಗರು ಹತ್ತಾರು ಜನರಿದ್ದರು. ಅವರ ಪೈಕಿ ಇಬ್ಬರು ಮಾತ್ರ ನನ್ನ ಪ್ರಾಣಸ್ನೇಹಿತರಾದರು— ಜಾಕಿ ಮತ್ತು ಪೀಟರ್. ಜಾಕಿಗೆ ಸುಮಾರು ಹದಿನೆಂಟು ವರ್ಷ. ಎತ್ತರವಾಗಿ ದೃಢಕಾಯನಾಗಿ ಬೆಳೆದಿದ್ದುದಲ್ಲದೆ ನೋಡುವುದಕ್ಕೂ ಲಕ್ಷಣವಾಗಿ, ಯಾವಾ

ಗಲೂ ನಗುನಗುತ್ತಾ ಇರುವನು. ಚೆನ್ನಾಗಿ ವಿದ್ಯಾಭ್ಯಾಸಮಾಡಿದವನು; ಬುದ್ಧಿವಂತ. ಯಾವ ಕೆಲಸಕ್ಕಾದರೂ ಸಿಂಹದಂತೆ ಧೈರ್ಯದಿಂದ ಮುನ್ನುಗ್ಗುವನಾದರೂ ಬಹಳ ಮೃದು ಸ್ವಭಾವದವನಾದ್ದರಿಂದ ಎಲ್ಲರ ಸ್ನೇಹವನ್ನೂ ಸಂಪಾದಿಸಿದ್ದನು. ನನ್ನನ್ನು ಕಂಡರೆ ಅವನಿಗೆ ಅಪರಿಮಿತವಾದ ಪ್ರೇಮ. ಹಡಗು ಹತ್ತಿದ ದಿನವೇ ನನ್ನನ್ನು ಕೂಗಿ "ಇಲ್ಲಿ ಬಾ ರೋವರ್. ನಮ್ಮಿಬ್ಬರನ್ನೂ ಒಂದೇ ಕೋಣೆಯಲ್ಲಿ ಹಾಕಿದ್ದಾರೆ. ನಿನ್ನನ್ನು ನೋಡಿದರೆ ಒಳ್ಳೆಯ ಹುಡುಗನಂತೆ ತೋರುತ್ತೀಯೆ. ಇಂದಿನಿಂದ ನಾವಿಬ್ಬರೂ ಸ್ನೇಹಿತರು, ತಿಳಿಯಿತೋ? ಬಾ, ನಾವು ಮಲಗುವ ಸ್ಥಳ ತೋರಿಸುತ್ತೇನೆ" ಎಂದು ಕರೆದುಕೊಂಡುಹೋದನು. ಪೀಟರ್ ವಯಸ್ಸಿನಲ್ಲೂ ಎತ್ತರದಲ್ಲೂ ಜಾಕಿಗಿಂತ ಚಿಕ್ಕವನು; ಅವನಿಗಿನ್ನೂ ಹದಿನಾಲ್ಕು ವರ್ಷ. ಬಹಳ ಚಟುವಟಿಕೆಯುಳ್ಳ ಹುಡುಗ, ಮತ್ತು ಹಾಸ್ಯಪ್ರಿಯ. ಯಾವಾಗಲೂ ಏನೋ ಕಪಿಚೇಷ್ಟೆ ಮಾಡುತ್ತಲೇ ಇರುವನು. ಆದರೆ ಆ ಚೇಷ್ಟೆಯಿಂದ ಇತರರಿಗೆ ವಿನೋದವಾಗುತ್ತಿತ್ತೇ ಹೊರತು ತೊಂದರೆಯಾಗುತ್ತಿರಲಿಲ್ಲ. ಅವನು ಎದುರಿಗಿದ್ದರೆ ಸಾಕು, ಎಲ್ಲರ ಮುಖದಲ್ಲಿಯೂ ನಗು ಹರಿಯುತ್ತಿತ್ತು. ಒಂದೆರಡು ದಿನಗಳಲ್ಲೇ ನಾವು ಮೂವರೂ ಗಾಢಸ್ನೇಹಿತರಾದೆವು.

ಪ್ರಯಾಣದ ಮೊದಲ ದಿನಗಳಲ್ಲಿ ಹೇಳುವಂಥ ವಿಶೇಷಗಳೇನೂ ನಡೆಯಲಿಲ್ಲ. ಎಲ್ಲ ನಾವಿಕರಂತೆ ನಾವೂ ಒಂದೆರಡು ಸಾರಿ ಬಿರುಗಾಳಿಗೆ ಸಿಕ್ಕಿದರೂ ಹೆಚ್ಚು ತೊಂದರೆಯಿಲ್ಲದೆ ಪಾರಾದೆವು. ಮೇಲೆ ಅಂತರಿಕ್ಷದ ನೀಲ, ಕೆಳಗೆ ಸಮುದ್ರದ ನೀಲ—ಇವುಗಳ ನಡುವೆ ಹೋಗುವುದೇ ಒಂದು ಸೌಭಾಗ್ಯ. ಬೇಸರವಾದಾಗ ಅಟ್ಟದ ಮೇಲೆ ನಿಂತು ಚಿತ್ರವಿಚಿತ್ರವಾದ ಸಮುದ್ರದ ಮೀನುಗಳನ್ನು ನೋಡುವುದೊಂದು ಕೆಲಸ. ನೀರಿನ ಮೇಲೆ ಒಂದೆರಡು ಅಡಿ ಎತ್ತರದಲ್ಲಿ ಹೋಗುವ ಹಾರುಮೀನುಗಳಂತೂ ನೋಡುವುದಕ್ಕೆ ಬಹಳ ಮನೋಹರವಾಗಿದ್ದವು. ಹೀಗೆಯೇ ಪ್ರಯಾಣಮಾಡಿ ಅಮೆರಿಕಾಖಂಡದ ದಕ್ಷಿಣದ ತುದಿಯಲ್ಲಿರುವ ಹಾರ್ನ್ ಭೂಶಿರದ ಹತ್ತಿರಕ್ಕೆ ಬರುವ ವೇಳೆಗೆ ಹವ ಬದಲಾಯಿಸಿ ಚಳಿಗಾಳಿಯು ಹೊಡೆತ ಜೋರಾಯಿತು. ನಾವಿಕರು ತಾವು ಹಿಂದೆ ಅಲ್ಲಿ ಪ್ರಯಾಣಮಾ

ಡಿದಾಗ ಬಿರುಗಾಳಿಗೆ ಸಿಕ್ಕಿ ಅನುಭವಿಸಿದ ಕಷ್ಟನಷ್ಟಗಳನ್ನು ಬಣ್ಣಿಸಿ ಆ ಅಪಾಯಕರವಾದ ಸ್ಥಳದಲ್ಲಿ ಮುಳುಗಿಹೋದ ಹಡಗುಗಳ ಕಥೆಯನ್ನು ಹೇಳಲಾರಂಭಿಸಿದರು. ನಮ್ಮ ಅದೃಷ್ಟವೇನೋ ಚೆನ್ನಾಗಿತ್ತು. ಯಾವ ಅಪಾಯಕ್ಕೂ ಸಿಕ್ಕದೆ ಸುರಕ್ಷಿತವಾಗಿ ಆ ಭೂಶಿರವನ್ನು ದಾಟಿದೆವು. ನಾಲ್ಕೈದು ವಾರ ಕಳೆದಮೇಲೆ ಉಷ್ಣವಲಯದ ಬೆಚ್ಚನೆಯ ಗಾಳಿ ನಮ್ಮ ಪಟಗಳನ್ನು ತುಂಬಿ ಹಡಗನ್ನು ಪೆಸಿಫಿಕ್ (ಶಾಂತ) ಸಾಗರಕ್ಕೆ ತಂದಿತು.

"ಇನ್ನೇನು, ಹವಳದ ದ್ವೀಪಗಳನ್ನು ಕಾಣಬಹುದು" ಎಂದುಕೊಂಡು ನಾನು ಕಣ್ಣಲ್ಲಿ ಕಣ್ಣಿಟ್ಟು ಸುತ್ತಲೂ ನೋಡುತ್ತಿದ್ದೆ. ಮೊದಲ ಸಾರಿ ಆ ದ್ವೀಪವೊಂದು ದೃಷ್ಟಿಗೆ ಬಿದ್ದಾಗ ನನ್ನ ಆನಂದವನ್ನು ಕೇಳಬೇಕೆ! ಶುಭ್ರವಾದ ಬಿಳಿಯ ಮರಳಿನ ತೀರಪ್ರದೇಶ, ಬಿಸಿಲಿನಲ್ಲಿ ಪ್ರಕಾಶಮಾನವಾಗಿ ಹೊಳೆಯುತ್ತ ಹಸುರುಗರಿಗಳ ಛತ್ರವನ್ನು ಹಿಡಿದು ನಿಂತಿರುವ ತೆಂಗಿನ ಮರಗಳು, ನಡುನಡುವೆ ಕಾಣುವ ಫಲವೃಕ್ಷಗಳು— ಇಂಥ ದ್ವೀಪವೊಂದರಲ್ಲಿ ವಾಸಿಸಬಹುದಾದರೆ ಅದಕ್ಕಿಂತ ಇನ್ನೇನು ಸೌಖ್ಯ ಬೇಕು! ನಮ್ಮನ್ನು ಇಲ್ಲಿಯೇ ಇಳಿಸಿಬಿಡಬಾರದೆ ಎಂದು ಹಂಬಲಿಸಿದೆವು. ನಮ್ಮ ಪ್ರಾರ್ಥನೆ ಯಾವ ದೇವರಿಗೆ ಮುಟ್ಟಿತೋ ಅಥವಾ ನಮ್ಮ ಹಡಗಿನ ದುರದೃಷ್ಟವೋ ತಿಳಿಯದು. ಅಂತೂ ನಮ್ಮ ಬಯಕೆ ನಮಗೆ ಬೇಡದ ರೀತಿಯಲ್ಲಿ ಪೂರ್ಣವಾಯಿತು.

ನಾವು ಉಷ್ಣವಲಯಕ್ಕೆ ಬಂದು ನಾಲ್ಕೈದು ದಿನಗಳಾದಮೇಲೆ ಒಂದು ರಾತ್ರಿ ಪ್ರಚಂಡವಾದ ಬಿರುಗಾಳಿ ಎದ್ದಿತು. ಗಾಳಿಯ ಮೊದಲನೆಯ ಹೊಡೆತಕ್ಕೆ ನಮ್ಮ ಕೂವೆ ಕಂಬಗಳಲ್ಲಿ ಎರಡು ಮುರಿದು ಬಿದ್ದು ಕೊನೆಯದೊಂದು ಮಾತ್ರ ಉಳಿಯಿತು. ಆದರೆ ಆಗಿನ ಸ್ಥಿತಿಯಲ್ಲಿ ಆ ಒಂದು ಕಂಬವೂ ನಮಗೆ ಬೇಕಾಗಿರಲಿಲ್ಲ. ಬಿರುಗಾಳಿಯ ರಭಸ ಅಷ್ಟು ಭಯಂಕರವಾಗಿರುವಾಗ ಕರವಸ್ತ್ರದಗಲ ಪಟವನ್ನೇರಿಸುವುದಕ್ಕೂ ನಮಗೆ ಧೈರ್ಯವಿಲ್ಲ; ಇನ್ನು ಕೂವೆಗಳ ಹಂಗೇನು! ಐದು ದಿನ ಗಾಳಿಯ ಉರುಬು ಸ್ವಲ್ಪವೂ ತಗ್ಗದೆ ಬಿಡುವಿಲ್ಲದ ರೋಷಾವೇಶದಿಂದ ಸಮುದ್ರವನ್ನು ಅಲ್ಲೋಲ ಕಲ್ಲೋಲ ಮಾಡಿತು. ಅದರ ವೇಗಕ್ಕೆ ಸಿಕ್ಕಿ

ಅಟ್ಟದ ಮೇಲಿದ್ದ ಸಾಮಾನುಗಳೆಲ್ಲಾ ನೀರಿನ ಪಾಲಾದವು. ಚಿಕ್ಕದೊಂದು ದೋಣಿ ಮಾತ್ರ ಉಳಿಯಿತು. ಹಡಗು ನಡೆಸುವವನನ್ನೂ ಸಹ ಗಾಳಿ ಹೊಡೆದುಕೊಂಡು ಹೋದೀತೆಂಬ ಭಯದಿಂದ ಅವನನ್ನು ಚಕ್ರಕ್ಕೆ ಕಟ್ಟಿದ್ದೆವು. ಮತ್ತೆ ನಮ್ಮ ಮನೆಮಠಗಳನ್ನು ಕಾಣುವ ಆಸೆಯಿಲ್ಲವೆಂದೇ ಎಲ್ಲರೂ ನಿರ್ಧರಿಸಿಕೊಂಡೆವು. ಹಡಗು ದಾರಿತಪ್ಪಿ ಎಲ್ಲಿಯೋ ಹೋಗುತ್ತಿದ್ದರೂ ಅದನ್ನು ತಡೆಯುವುದು ಸಾಧ್ಯವಾಗಲಿಲ್ಲ. ನಾವು ಎಲ್ಲಿದ್ದೆವೋ ಕ್ಯಾಪ್ಟನ್ನನಿಗೇ ತಿಳಿಯದು. ಪೆಸಿಫಿಕ್ ಸಾಗರದಲ್ಲಿ ಎಲ್ಲೆಲ್ಲಿಯೂ ಇರುವ ಹವಳದ ಬಂಡೆಗಳಿಗೆ ತಗಲಿ ಹಡಗು ಒಂದು ಕ್ಷಣದಲ್ಲಿ ಒಡೆದುಹೋಗಬಹುದು.

ಆರನೆಯ ದಿನ ಬೆಳಕು ಹರಿಯುವ ಹೊತ್ತಿಗೆ ಸ್ವಲ್ಪ ದೂರದಲ್ಲಿ ಒಂದು ದ್ವೀಪ ಕಾಣಿಸಿತು. ಅದರ ಸುತ್ತಲೂ ಇದ್ದ ಬಂಡೆಯ ಸಾಲಿನ ಮೇಲೆ ಅಲೆಗಳು ರೋಷದಿಂದ ಅಪ್ಪಳಿಸುತ್ತಿದ್ದವು. ಆ ಸಾಲಿನಿಂದಾಚೆಗೇನೋ ನೀರು ಶಾಂತವಾಗಿದ್ದರೂ ಬಂಡೆಗಳನ್ನು ದಾಟಿ ಹೋಗುವುದು ಹೇಗೆ? ಒಂದು ಕಡೆ ಮಾತ್ರ ಸ್ವಲ್ಪ ಇಕ್ಕಟ್ಟಾದ ದ್ವಾರವಿದ್ದಂತೆ ಕಂಡಿತು. ಹಡಗನ್ನು ಆ ಕಡೆಗೆ ತಿರುಗಿಸಬೇಕೆಂದು ಪ್ರಯತ್ನಿಸುವಷ್ಟರಲ್ಲಿ ನಮ್ಮ ಚುಕ್ಕಾಣಿ ಮುರಿದು ಹೋಯಿತು. ಇನ್ನು ಹಡಗನ್ನು ನಡೆಸುವಂತೆಯೇ ಇಲ್ಲ. ಗಾಳಿ ಹೊಡೆದುಕೊಂಡು ಹೋದ ಕಡೆಗೆ ಹೋಗಬೇಕು.

ಕ್ಯಾಪ್ಟನ್ನನು ನಾವಿಕರೆಲ್ಲರನ್ನೂ ಕರೆದು "ಹಡಗು ಉಳಿಯುವ ಆಸೆ ಏನೇನೂ ಇಲ್ಲ. ಇನ್ನು ಅರ್ಧ ಘಂಟೆಗೆ ಅದು ಬಂಡೆಗೆ ತಗಲಿ ಮುಳುಗಿ ಹೋಗುತ್ತದೆ. ದೋಣಿಯನ್ನು ಸಿದ್ಧಮಾಡಿ. ನಾವು ಬದುಕಿದರೆ ಅದರಿಂದ ಬದುಕಬೇಕು" ಎಂದನು. ಆ ಬಿರುಗಾಳಿಯಲ್ಲಿ ದೋಣಿ ಉಳಿಯುವುದುಂಟೆ? ಮನಸ್ಸಿನಲ್ಲಿ ನಿರಾಸೆಯೇ ಇದ್ದರೂ, ಬದುಕುವುದಕ್ಕೆ ಕೊನೆಯದೊಂದು ಪ್ರಯತ್ನ ಮಾಡಬೇಕೆಂದು ನಾವಿಕರು ದೋಣಿಯನ್ನು ತೆಗೆಯಲು ಹೊರಟರು.

ನಮ್ಮ ಹಣೆಯ ಬರಹ ಹೇಗಿದೆಯೋ ಎಂದು ಯೋಚಿಸುತ್ತ ನಾನು ಮತ್ತು ಪೀಟರ್ ಅಟ್ಟದ ಮೇಲೆ ನಿಂತಿದ್ದಾಗ ಜಾಕಿ ನಮ್ಮನ್ನು

ಕೂಗಿದನು. ಅವನ ಮುಖ ಬಹಳ ಗಂಭೀರವಾಗಿತ್ತು. "ರೋವರ್, ನಾವು ಮೂರು ಜನರೂ ಚದರಿ ಹೋಗಬಾರದು. ಆ ದೋಣಿಯನ್ನು ನೆಚ್ಚಿ ಪ್ರಯೋಜನವಿಲ್ಲ. ಅಷ್ಟೊಂದು ಜನ ಕಿಕ್ಕಿರಿದು ತುಂಬಿದರೆ ಖಂಡಿತ ಅದು ದಡವನ್ನು ಸೇರಲಾರದು. ನಾಲ್ಕು ಮಾರು ಹೋಗುವುದರಲ್ಲೇ ಮುಳುಗಿ ಹೋಗುತ್ತದೆ. ಈ ದೊಡ್ಡ ಹುಟ್ಟನ್ನು ಹಿಡಿದುಕೊಂಡು ನೀರಿಗೆ ಧುಮುಕಿ ಬಿಡೋಣ. ಅದು ನಮ್ಮ ತೂಕವನ್ನು ತಡೆದೀತು. ಅದರ ಸಹಾಯದಿಂದ ನಾವು ಬಂಡೆಗಳ ಮೇಲೆ ತೇಲಿ ಹೋಗಿ ನೀರು ಶಾಂತವಾಗಿರುವ ಸ್ಥಳವನ್ನು ಸೇರಬಹುದು. ಅಲ್ಲಿಂದ ದಡ ಹತ್ತಿರವಾಗಿರುವುದರಿಂದ ಹೇಗಾದರೂ ಈಜಿಕೊಂಡು ನೆಲವನ್ನು ಮುಟ್ಟಬಹುದು. ಏನು ಹೇಳುತ್ತೀರಿ? ನನ್ನ ಜೊತೆಗೆ ಬರುತ್ತೀರಾ?" ಎಂದನು.

ನಾವು ಒಪ್ಪಿದೆವು. ಬದುಕುವ ಆಸೆ ಹೇಗೂ ಇರಲಿಲ್ಲ. ಬಂಡೆಗಳ ಮೇಲೆ ನೊರೆನೊರೆಯಾಗಿ ಕುದಿದು ಮೊರೆಯುತ್ತಿದ್ದ ಅಲೆಗಳನ್ನು ನೋಡಿದಾಗ ಸಾವು ಹತ್ತಿರ ಬಂತೆಂದೇ ಖಂಡಿತ ಮಾಡಿಕೊಂಡೆವು. ಕ್ಯಾಪ್ಟನ್ ಅಟ್ಟದ ಮೇಲೆ ನಿಂತು ದೋಣಿಯನ್ನು ನೀರಿಗಿಳಿಸುತ್ತಿದ್ದ ನಾವಿಕರಿಗೆ ಧೈರ್ಯ ಹೇಳುತ್ತಿದ್ದನು. ನಾವು ನೆಚ್ಚಿಕೊಂಡಿದ್ದ ಹುಟ್ಟು ಬೇರೆ ಮರದ ಸಾಮಾನುಗಳಲ್ಲಿ ಸೇರಿದ್ದುದರಿಂದ ಅದನ್ನು ಬಿಡಿಸಲು ಜಾಕ್ ಕೊಡಲಿಯಿಂದ ಒಂದು ಪೆಟ್ಟು ಕೊಟ್ಟನು. ಗುರಿತಪ್ಪಿ ಕೊಡಲಿ ಹುಟ್ಟಿನಲ್ಲಿಯೇ ಸಿಕ್ಕಿಕೊಂಡಿತು. ಆದರೆ ದೇವರ ದಯೆಯಿಂದ ಹಡಗು ಒಂದು ಕಡೆಗೆ ಓಲಿ ಹುಟ್ಟು ತಾನಾಗಿಯೇ ಬೇರೆಯಾಯಿತು. ನಾವು ಅದನ್ನೆತ್ತಿಕೊಳ್ಳುವ ಸಮಯಕ್ಕೆ ಸರಿಯಾಗಿ ಪರ್ವತಾಕಾರದ ಅಲೆಯೊಂದು ನಮ್ಮ ಕಡೆಗೆ ಧಾವಿಸಿ ಬಂದು ಸಿಡಿಲಿನಂತೆ ಹಡಗಿಗೆ ಅಪ್ಪಳಿಸಿತು. ಅದೇ ನಿಮಿಷದಲ್ಲಿ ಹಡಗು ಬಂಡೆಗೆ ತಗಲಿ ಇದ್ದ ಒಂದು ಕಂಬವೂ ಮುರಿದು ದೋಣಿಯು, ಜನರೆಲ್ಲರೊಡನೆ ಮುಗುಚಿಕೊಂಡಿತು. ನಾವು ಮೂವರು ಮಾತ್ರ ಹುಟ್ಟನ್ನು ಹಿಡಿದು ನೆಗೆದು ಬಿಟ್ಟೆವು. ಮರುಕ್ಷಣದಲ್ಲಿಯೇ ಸಮುದ್ರದ ಹುಚ್ಚು ಅಲೆಗಳೊಡನೆ ಹೋರಾಟ. ಆ ಸಮಯದಲ್ಲಿ ಸಹ ಉಳಿದವರ ಗತಿಯೇನು ಎಂಬ

ಯೋಚನೆ ನನ್ನನ್ನು ಬಾಧಿಸಿತು. ತಿರುಗಿ ನೋಡಿದರೆ—ನಮ್ಮ ದೋಣಿ ನೀರಿನ ಸುಳಿಗೆ ಸಿಕ್ಕಿ ಗಿರಗಿರನೆ ತಿರುಗುತ್ತಿತ್ತು. ಆ ಘಳಿಗೆಯಲ್ಲೇ ನನಗೆ ಜ್ಞಾನ ತಪ್ಪಿಹೋಯಿತು.

೨

## ಹವಳದ ದ್ವೀಪ

ಮೂರ್ಛೆ ತಿಳಿದಾಗ ನಾನು ಮೆದುವಾದ ಹುಲ್ಲು ಹಸಲೆಯ ಮೇಲೆ ಮಲಗಿದ್ದೆ. ದೂರದಿಂದ ಸಮುದ್ರದ ಗರ್ಜನೆ ಕೇಳಿಬರುತ್ತಿತ್ತು. ಪಕ್ಕದಲ್ಲೇ ಪೀಟರ್ ಮೊಣಕಾಲೂರಿಕೊಂಡು ನನ್ನ ಮುಖವನ್ನು ನೀರಿನಿಂದ ತೊಳೆಯುತ್ತಿದ್ದನು. ಜಾಕಿ ಹತ್ತಿರದಲ್ಲೇ ನಿಂತು ಗಾಬರಿಗೊಂಡವನಂತೆ ನನ್ನ ಕಡೆಯೇ ನೋಡುತ್ತಿದ್ದನು. ನಾನು ಕಣ್ಣು ಬಿಟ್ಟದ್ದನ್ನು ನೋಡಿ ಇಬ್ಬರೂ ಮಾತಾಡಿಸಿದರು.

" ಈಗ ಹೇಗಿದೆ, ರೋವರ್ ? ಸ್ವಲ್ಪ ವಾಸಿಯೆ ? "

" ಮಾತಾಡುವುದಕ್ಕಾಗುತ್ತದೆಯೆ, ರೋವರ್ ! ಆಯಾಸಮಾಡಿಕೊಳ್ಳಬೇಡ."

ಅವರ ಮಾತು ಕೇಳಿದಾಗ ನನಗೆ ಮೂರ್ಛೆಯೇನೂ ಇಲ್ಲದಿದ್ದರೂ ನಾನು ಎಲ್ಲಿದ್ದೆ, ಅಲ್ಲಿಗೆ ಹೇಗೆ ಬಂದೆ, ಎಂಬುದೊಂದೂ ತಿಳಿಯದು. ' ಸ್ವಲ್ಪ ವಾಸಿಯೆ ? ' ಎಂದಾಗ ನನಗೆ ಆಶ್ಚರ್ಯವಾಯಿತು.

" ವಾಸಿಯಲ್ಲದೆ ಮತ್ತೇನು ? ನನಗೇನಾಗಿದೆ ? ಹುಷಾರಾಗಿಯೇ ಇದ್ದೇನಲ್ಲ ! ನಿಮ್ಮ ಮಾತು ಅರ್ಥವೇ ಆಗುವುದಿಲ್ಲ.''

ಅಳುಮುಖ ಮಾಡಿಕೊಂಡಿದ್ದ ಪೀಟರ್ ಈಗ ನಗುತ್ತಾ "ಅಯ್ಯೊ, ಎಂಥಾ ಕಪಟಿಯೋ ನೀನು ! ಹುಷಾರಾಗಿದ್ದರೂ ಮೂರ್ಛೆ ಹೋದವನ ಹಾಗೆ ನಟಿಸಿ ನಮ್ಮನ್ನೆಲ್ಲಾ ಗಾಬರಿಪಡಿಸುವುದೆ ? '' ಎಂದನು. ನಾನು ಸಾಯುವ ಸ್ಥಿತಿಯಲ್ಲಿದ್ದೆನೆಂದೇ ಅವನು ಭಾವಿಸಿದ್ದನಂತೆ.

ಮೆಲ್ಲನೆ ಸ್ವಲ್ಪ ಮೇಲಕ್ಕೆದ್ದು ನಾನು ಹಣೆಯನ್ನು ಮುಟ್ಟಿ

ನೋಡಿಕೊಂಡೆ. ಅಲ್ಲಿ ದೊಡ್ಡದೊಂದು ಗಾಯವಾಗಿ ಇನ್ನೂ ರಕ್ತ ಸೋರುತ್ತಿತ್ತು. ಜಾಕಿ ನನ್ನನ್ನು ಏಳಗೊಡಿಸಲಿಲ್ಲ.

"ಸುಮ್ಮನೆ ಮಲಗು, ರೋವರ್. ಬಹಳ ರಕ್ತ ಸುರಿದು ನಿಶ್ಶಕ್ತಿಯಾಗಿದೆ. ಎಲ್ಲಿ, ಸ್ವಲ್ಪ ನೀರು ಕುಡಿ, ತುಟಿಯೆಲ್ಲ ಒಣಗಿದ ಹಾಗಿದೆ. ಈಗ ಏನೂ ಮಾತಾಡಬೇಡ. ಹಿಂದಿನ ಕಥೆಯನ್ನೆಲ್ಲಾ ನೀನು ಸುಧಾರಿಸಿಕೊಂಡ ಮೇಲೆ ಕೇಳಬಹುದು. ಈಗ ನಾಲಗೆ ಬಿಗಿ ಹಿಡಿದುಕೊಂಡು ವಿಶ್ರಾಂತಿ ತೆಗೆದುಕೊ."

ಪೀಟರ್ ಮಾತ್ರ ನನ್ನನ್ನು ಸುಮ್ಮನೆ ಬಿಡಲಿಲ್ಲ.

"ಮಾತಾಡಲಿ ಬಿಡು, ಜಾಕಿ. ಈಗ ಒಂದು ಘಂಟೆಯಿಂದ ಮುರುತುಕೊಂಡು ಸತ್ತ ಹೆಣದ ಹಾಗೆ ಅಲುಗಾಡದೆ ಬಿದ್ದಿದ್ದ. ಎದ್ದು ಕುಳಿತುಕೊಂಡು 'ನಾನು ಬದುಕಿದ್ದೇನೆ' ಅಂತ ಒಂದು ಹೇಳಿಕೆ ಕೊಡಲಿ. ಅಲ್ಲವೋ ರೋವರ್, ನಿನ್ನಂಥ ವಿಚಿತ್ರ ಪ್ರಾಣಿಯನ್ನು ನಾನೆಲ್ಲೂ ಕಂಡಿಲ್ಲ. ಏನಾದರೂ ಚೇಷ್ಟೆ ಮಾಡುತ್ತಲೇ ಇರುತ್ತೀಯೆ. ಹೆಚ್ಚು ಕಡಿಮೆ ನನ್ನ ಹಲ್ಲನ್ನೆಲ್ಲಾ ಮುರಿದು ಬಿಟ್ಟೆ. ಅಷ್ಟೇ ಸಾಲದು ಅಂತ ನನ್ನ ಪ್ರಾಣಕ್ಕೇ ಸಂಚಕಾರ ತಂದಿದ್ದೆ. ಇಷ್ಟೆಲ್ಲಾ ಅವಾಂತರ ಮಾಡಿಬಿಟ್ಟು, ಈಗ ಮರಳಿಯಹಾಗೆ ಮಲಗಿ ಬಿಟ್ಟೆಯಲ್ಲ! ಇದು ಶುದ್ಧ ಕೇಡಿಗತನ.''

ಅವನ ಮಾತು ನನಗೆ ಅರ್ಥವೇ ಆಗಲಿಲ್ಲ.

"ಏನೋ ನೀನು ಹೇಳುವುದು? ನಿನ್ನ ಪ್ರಾಣಕ್ಕೆ ಸಂಚಕಾರ ತಂದಿದ್ದೆ ಅಂದರೇನೋ?"

"ನಟಿಸು, ಏನೂ ತಿಳಿಯದವನ ಹಾಗೆ ನಟಿಸು! ನನ್ನ ಭಾಷೆ ನಿನಗೆ ಅರ್ಥವೇ ಆಗುವುದಿಲ್ಲ ಅಲ್ಲವೆ, ಪಾಪ! ನಾವು ನೀರಿಗೆ ಬಿದ್ದಾಗ. . . .''

"ನಾವು ನೀರಿಗೆ ಬಿದ್ದಮೇಲೆ ಏನಾಯಿತೋ ಒಂದೂ ನೆನಪಿಲ್ಲ.''

ಹಿಂದಿನ ಕಥೆಯನ್ನೆಲ್ಲಾ ಜಾಕಿ ಹೇಳಿದ.

"ಪೀಟರ್, ನೀನು ಬಾಯಿ ಮುಚ್ಚಿಕೊಂಡು ಕುಕ್ಕರಿಸು. ಹುಚ್ಚು ಹುಚ್ಚಾಗಿ ಮಾತಾಡಿ ರೋವರಿಗೆ ಆಯಾಸಮಾಡಬೇಡ. ಏನು

ನಡೆಯಿತು ಅಂತ ನಾನು ಹೇಳುತ್ತೇನೆ. ಹಡಗು ಬಂಡೆಗೆ ತಗಲಿದಾಗ ನಾವು ಮೂರು ಜನರೂ ಸಮುದ್ರಕ್ಕೆ ಹಾರಿದ್ದು ಜ್ಞಾಪಕವಿದೆಯಲ್ಲವೆ, ರೋವರ್? ಹಾರುವಾಗ ಆ ಹುಟ್ಟು ನಿನ್ನ ಮುಖಕ್ಕೆ ತಗಲಿ ಹಣೆಯ ಮೇಲೆ ಗಾಯವಾಯಿತು. ಆದ್ದರಿಂದಲೇ ನಿನಗೆ ಜ್ಞಾನತಪ್ಪಿದ್ದು. ಮೂರ್ಛೆಯಲ್ಲೇ ನೀನು ಪೀಟರಿನ ಕೊರಳಿಗೆ ಜೋತು ಬಿದ್ದೆ. ನಿನ್ನ ಕೈಯಲ್ಲಿದ್ದ ಟೆಲಿಸ್ಕೋಪು ಅವನ ಬಾಯಲ್ಲಿ ಸಿಕ್ಕಿಕೊಂಡಿತು.''

"ಸಿಕ್ಕಿಕೊಂಡಿತೆ? ಚೆನ್ನಾಗಿ ಹೇಳಿದೆ! ನನ್ನ ಗಂಟಲೊಳಕ್ಕೆ ಅದನ್ನು ತುರುಕಿ ಕೊಂದುಹಾಕಬೇಕು ಅಂತ ಮಾಡಿದ್ದ ಅನ್ನು. ಈಗಲೂ ನನ್ನ ಗಂಟಲು ತೆಗೆದು ನೋಡಿದರೆ ಟೆಲಿಸ್ಕೋಪಿನ ಗುರುತು ಕಾಣುತ್ತೆ."

"ಇರಬಹುದು. . . . ನೀನು ಪೀಟರಿನ ಕೊರಳು ಹಿಡಿದು ಕೊಂಡದ್ದು ನೋಡಿ ಅವನು ಉಸಿರು ಕಟ್ಟಿ ಸತ್ತುಹೋಗಬಹುದು ಅಂತ ನಾನೂ ಹೆದರಿದ್ದೆ ಆದರೆ ಅವನು ಹುಟ್ಟನ್ನು ಬಲವಾಗಿ ಹಿಡಿದಿದ್ದ. ನಾನು ಹಾಗೂ ಹೀಗೂ ನಿಮ್ಮಿಬ್ಬರನ್ನೂ ದಡದ ಕಡೆಗೆ ತಳ್ಳಿಕೊಂಡು ಬಂದೆ. ಆ ಬಂಡೆಯ ಸಾಲನ್ನು ದಾಟಿ ಬಂದ ಮೇಲೆ ತೊಂದರೆಯೇನೂ ಆಗಲಿಲ್ಲ.''

"ಹಡಗಿನ ಗತಿಯೇನಾಯಿತು, ಜಾಕಿ? ಈ ರೋವರಿನ ಕೈಯಿಂದ ಪಾರಾಗುವ ಗೊಂದಲದಲ್ಲಿ ನನಗೇನೂ ಗೊತ್ತಾಗಲಿಲ್ಲ. ಒಡೆದು ಚೂರಾಯಿತೋ?"

"ಚೂರಾಯಿತೋ ಇಲ್ಲವೋ, ಅಂತೂ ಮುಳುಗಿ ಹೋಯಿತು.''

"ನಾವಿಕರು, ಕ್ಯಾಪ್ಟನ್—ಅವರೆಲ್ಲಾ ಏನಾದರು?"

ಜಾಕಿ ತಲೆ ಅಲ್ಲಾಡಿಸಿದ.

"ಎಲ್ಲಾ ಸಮುದ್ರಕ್ಕೆ ಆಹುತಿಯಾದರೆ?"

"ಏನೋ ತಿಳಿಯದು. ನನಗೆ ತೋರುವ ಮಟ್ಟಿಗೆ ಅವರು ಯಾರೂ ಬದುಕಿರಲಾರರು. ಹಡಗು ದ್ವೀಪದ ತುದಿಯಲ್ಲಿ ಬಂಡೆಗೆ ತಗಲಿತು. ನಾವಿಕರೆಲ್ಲಾ ದೋಣಿಯೊಳಗೆ ತುಂಬಿಕೊಂಡರು. ಅದು ಮುಳುಗಲಿಲ್ಲ. ಆದರೂ ಅವರು ದ್ವೀಪದ ಹತ್ತಿರಕ್ಕೆ ಬರುವುದು ಸಾಧ್ಯವಾಗಲಿಲ್ಲ. ಗಾಳಿ ದೂರಕ್ಕೆ ಹೊಡೆದುಕೊಂಡು ಹೋಯಿತು.''

ಜಾಕಿ ಮಾತು ನಿಲ್ಲಿಸಿದಮೇಲೆ ಎಲ್ಲರೂ ಸ್ವಲ್ಪ ಹೊತ್ತು ಮೌನವಾಗಿದ್ದೆವು. ಎಲ್ಲರಿಗೂ "ಮುಂದೇನು?" ಎಂಬ ಯೋಚನೆ. ನನ್ನ ಮಟ್ಟಿಗೆ ಹೇಳಬಹುದಾದರೆ ಮನಸ್ಸಿಗೆ ಅಷ್ಟೇನೂ ಸಂತೋಷವಿರಲಿಲ್ಲ.

ಯಾವ ವಿಧವಾದ ಸಹಾಯಸಂಪತ್ತುಗಳೂ ಇಲ್ಲದೆ ಇಲ್ಲಿ ಬಂದು ಬಿದ್ದಹಾಗಾಯಿತಲ್ಲ ಎಂದು ಯೋಚಿಸುತ್ತ, "ನಾವು ಕೆಟ್ಟೆವು" ಎಂದೆ.

ಜಾಕಿ ನಕ್ಕನು.

"ಕೆಟ್ಟೆವೆ, ರೋವರ್? ಬದುಕಿದೆವು ಅನ್ನು."

ಪೀಟರಿನ ಮನಸ್ಸಿನಲ್ಲಂತೂ ಯಾವ ಚಿಂತೆಯೂ ಇದ್ದಂತೆ ತೋರಲಿಲ್ಲ.

"ನನಗೇನು ತೋರುತ್ತೆ ಹೇಳಲೆ? ಈ ದ್ವೀಪ ಬಹಳ ಸುಂದರವಾದ ಸ್ಥಳ. ನಮ್ಮ ಪಾಡಿಗೆ ನಾವು ಸುಖವಾಗಿರುವುದಕ್ಕೆ ಸೊಗಸಾದ ಅವಕಾಶ ಸಿಕ್ಕಿದ ಹಾಗಾಯಿತು. ಅರಸಿನ ಅಂಕೆಯಿಲ್ಲ, ದೈವದ ಕಾಟವಿಲ್ಲ. ದ್ವೀಪ ನಮಗೆ ಸೇರಿದ್ದು ತಾನೆ? ಇವತ್ತೇ ಅದನ್ನು ಸ್ವಾಧೀನಕ್ಕೆ ತೆಗೆದುಕೊಳ್ಳೋಣ. ಇಲ್ಲಿ ಜನರೇನಾದರೂ ಇದ್ದರೆ ನಾವು ಅವರಲ್ಲೇ ನೌಕರಿಗೆ ಸೇರುವುದು. ಎಷ್ಟಾದರೂ ನಾವು ಅವರಿಗಿಂತ ಬುದ್ಧಿವಂತರಾದ್ದರಿಂದ ಒಂದೆರಡು ತಿಂಗಳಲ್ಲಿಯೇ ಅವರನ್ನೆಲ್ಲಾ ನಮ್ಮ ಅಧೀನಕ್ಕೆ ತಂದುಕೊಳ್ಳಬಹುದು. ಜಾಕಿ ದೊರೆಯಾಗುತ್ತಾನೆ. ರೋವರ್, ನೀನು ಮಂತ್ರಿಯಾಗಬಹುದು. ನಾನು. . . ."

"ಇಲ್ಲಿ ಜನರೇ ಇಲ್ಲ ಅಂತ ಇಟ್ಟುಕೊಳ್ಳೋಣ. ಆಗ?"

"ಮತ್ತೂ ಒಳ್ಳೆಯದೇ ಆಯಿತು. ಲಕ್ಷಣವಾಗಿ ಒಂದು ಮನೆ ಕಟ್ಟುವುದು. ಸುತ್ತ ಸುವಾಸನೆಯಾಗಿರುವ ಹೂವಿನ ಗಿಡಗಳನ್ನು ನೆಟ್ಟು ಕೈತೋಟಮಾಡಿಕೊಳ್ಳುವುದು. ಜಮೀನೆಲ್ಲಾ ನಮ್ಮದೇ ಆದ್ದರಿಂದ ಬೇಸಾಯಮಾಡಬಹುದು. ಉತ್ತು, ನಾಟಿಹಾಕಿ, ಕಳೆ ಕಿತ್ತು, ಕೊಯ್ಲುಮಾಡಿ, ತಿಂದು, ತೇಗಿ . . . ."

ಜಾಕಿಗೆ ಆಗ ತಮಾಷೆ ಬೇಕಾಗಿರಲಿಲ್ಲ. ಅವನ ಗಂಭೀರವಾದ ಮುಖವನ್ನು ನೋಡಿ ಪೀಟರಿನ ಮಾತು ನಿಂತುಹೋಯಿತು.

"ಪೀಟರ್, ಈಗ ಹಾಸ್ಯಕ್ಕೆ ಸಮಯವಲ್ಲ. ನನಗೇನೋ ಬಹಳ

ಚಿಂತೆಗಿಟ್ಟುಕೊಂಡಿದೆ. ಇಲ್ಲಿ ಜನರು ಯಾರೂ ಇಲ್ಲದಿದ್ದರೆ ನಾವು ಬಹುಮಟ್ಟಿಗೆ ಕಾಡುಮೃಗಗಳ ಹಾಗೆ ಜೀವಿಸಬೇಕಾಗುತ್ತೆ. ನಮಗೆ ಯಾವ ತರಹ ಸಾಮಾನೂ ಆಯುಧವೂ ಇಲ್ಲ.''

" ಕ್ಷಮಿಸಬೇಕು. ನನ್ನ ಹತ್ತಿರ ಒಂದು ಚೂರಿ ಇದೆ.'' ಪೀಟರ್ ತನ್ನ ಜೇಬಿಗೆ ಕೈಹಾಕಿ ಅಲಗು ಮುರಿದಿದ್ದ ಹಳೆಯ ಚೂರಿಯೊಂದನ್ನು ತೆಗೆದ.

"ಸಂತೋಷ. ಏನೂ ಇಲ್ಲದೆ ಇರುವುದಕ್ಕಿಂತ ಅಲಗುಮುರಿದ ಚೂರಿಯಾದರೂ ವಾಸಿ. ಈಗ ಹರಟೆಯಲ್ಲಿ ಕಾಲ ಕಳೆಯುವುದಕ್ಕೆ ಬದಲು ಸ್ವಲ್ಪ ಕೆಲಸಮಾಡೋಣ. ರೋವರ್, ನಿನಗೆ ನಡೆಯುವುದಕ್ಕಾಗುತ್ತದೆಯೆ? ಮೊದಲು ನಮ್ಮ ಜೇಬುಗಳನ್ನೆಲ್ಲಾ ಹುಡುಕಿ ಏನೇನು ಸಾಮಾನಿದೆಯೋ ನೋಡಬೇಕು. ಆಮೇಲೆ ಈ ಗುಡ್ಡವನ್ನು ಹತ್ತಿ ದ್ವೀಪದ ಸ್ವರೂಪ ಹೇಗಿದೆ ತಿಳಿದುಕೊಳ್ಳೋಣ.''

ಮೂರು ಜನವೂ ಒಂದು ಬಂಡೆಯಮೇಲೆ ಕುಳಿತು ಜೇಬುಗಳನ್ನೆಲ್ಲಾ ಬಹಳ ಜಾಗರೂಕತೆಯಿಂದ ಶೋಧಿಸಿ ಸಿಕ್ಕಿದ ಸಾಮಾನುಗಳನ್ನೆಲ್ಲಾ ಬಂಡೆಯಮೇಲೆ ತೆಗೆದಿಟ್ಟೆವು. ನಮ್ಮ ಆಸ್ತಿಯೆಲ್ಲಾ ಸೇರಿ ಹೀಗಿತ್ತು :—೧. ಮಧ್ಯಕ್ಕೆ ಸರಿಯಾಗಿ ಮುರಿದು, ತುಕ್ಕು ಹಿಡಿದು ಗರಗಸದಂತೆ ಹಲ್ಲುಹಲ್ಲಾಗಿದ್ದ ಚೂರಿ. " ಇದು ಬಹು ಬೆಲೆಯುಳ್ಳ ಆಯುಧ. ಚೂರಿಯಾದರೂ ಆಗಬಹುದು, ಗರಗಸವಾದರೂ ಆಗಬಹುದು'' ಎಂದು ಪೀಟರ್ ಅದನ್ನು ಹೊಗಳಿದ. ೨. ಸಿಲ್ವರ್ ಬೆಳ್ಳಿಯ ಹಳೆಯ ಸೀಸಕಡ್ಡಿಯ ಕೊಳವೆ—ಆದರಲ್ಲಿ ಸೀಸವೇನೂ ಇರಲಿಲ್ಲ. ೩. ಸುಮಾರು ಆರು ಗಜ ಉದ್ದವಾದ ಚಾವಟಿಯ ಹುರಿ. ೪. ಹಡಗಿನ ಪಟವನ್ನು ಹೊಲಿಯುವಂಥ ಸಣ್ಣ ಸೂಜಿ. ೫. ಟೆಲಿಸ್ಕೋಪು—ಹಡಗು ಮುಳುಗಿದಾಗ ನನ್ನ ಕೈಯಲ್ಲಿದ್ದದ್ದು. ಒಂದು ಕಡೆಯ ಗಾಜು ಒಡೆದು ಹೋಗಿದ್ದರೂ ಇನ್ನೊಂದು ಕಡೆಯದು ಉಳಿದಿತ್ತು. ೬. ಜಾಕಿಯ ಬೆರಳಿನಲ್ಲಿದ್ದ ಹಿತ್ತಾಳೆಯ ಉಂಗುರ. ಇವುಗಳ ಜೊತೆಗೆ ಸ್ವಲ್ಪ ಚಕಮುಕಿಯ ಹತ್ತಿ, ಮತ್ತು ನಮ್ಮ ಮೈಮೇಲಿದ್ದ ಬಟ್ಟೆಗಳು.

ನಾನು ಇದನ್ನೆಲ್ಲಾ ಪರೀಕ್ಷಿಸುತ್ತಿದಾಗ ಜಾಕಿ ಎದ್ದು ನಿಂತು

“ ದೋಣಿಯ ಹುಟ್ಟು ! ಅದನ್ನು ಮರೆತೇ ಬಿಟ್ಟೆವಲ್ಲ ! ಎಂದ.

“ ಅದರಿಂದೇನು ಕಿರೀಟ ಬಂದಹಾಗಾಯಿತು ? ಇಲ್ಲಿರುವ ಮರಗಳಿಂದ ಅಂಥ ಹುಟ್ಟುಗಳು ಸಾವಿರ ಬೇಕಾದರೂ ಮಾಡಿಕೊಳ್ಳಬಹುದು ” ಎಂದು ಪೀಟರ್ ಗೊಣಗಿದ.

‘‘ ಹೌದೋ, ಪೆಚ್ಚು. ಆದರೆ ಆ ಹುಟ್ಟಿಗೆ ಕಬ್ಬಿಣದ ಪಟ್ಟಿ ಕಟ್ಟಿದೆ. ಅದರಿಂದ ಎಷ್ಟು ಪ್ರಯೋಜನವಾಗಬಹುದು ಗೊತ್ತೆ ?’’

ಎಲ್ಲರೂ ಎದ್ದು ಹುಟ್ಟು ತರುವುದಕ್ಕೆ ಸಮುದ್ರದ ಕರೆಯ ಕಡೆ ಹೊರಟೆವು. ಇನ್ನೂ ಸ್ವಲ್ಪ ನಿಶ್ಶಕ್ತಿಯಾಗಿದ್ದುದರಿಂದ ನಾನು ಹಿಂದೆ ಬೀಳಬೇಕಾಯಿತು. ಇದನ್ನು ಕಂಡು ಜಾಕಿ ನನ್ನ ಸಹಾಯಕ್ಕೆ ಬಂದನು. ಇತರರ ಕಷ್ಟವನ್ನು ಅರಿತು ಅವರಿಗೆ ಸಹಾಯಮಾಡುವುದು ಅವನ ಹುಟ್ಟುಗುಣ.

ನಾವು ಮೊದಲು ಕುಳಿತಿದ್ದ ಸ್ಥಳದ ಸುತ್ತ ದಟ್ಟವಾದ ಪೊದೆಗಳಿದ್ದುದರಿಂದ ಅಲ್ಲಿಂದ ದ್ವೀಪದ ಯಾವ ಭಾಗವೂ ಕಾಣುತ್ತಿರಲಿಲ್ಲ. ತೀರದ ಕಡೆಗೆ ಇಳಿದು ಹೋಗುವಾಗ ಎಂಥ ರಮ್ಯವಾದ ಸ್ಥಳಕ್ಕೆ ಬಂದು ಸೇರಿದೆವೆಂದು ನಮಗೆ ತಿಳಿಯಿತು. ಮನಸ್ಸಿಗೆ ಹಗುರವಾಗಿ ಉಲ್ಲಾಸ ಉಕ್ಕಿ ಬಂತು. ಬಿರುಗಾಳಿ ನಮ್ಮ ಹಡಗನ್ನು ನಾಶಮಾಡುವ ಉದ್ದೇಶದಿಂದಲೇ ಬಂದಿತ್ತೋ ಏನೋ, ತನ್ನ ಕೆಲಸ ಮುಗಿದಮೇಲೆ ಸಂಪೂರ್ಣವಾಗಿ ನಿಂತುಹೋಗಿತ್ತು. ವಾಯುಮಂಡಲವೆಲ್ಲಾ ನೀರಿನಿಂದ ತೊಳೆದಂತೆ ಶುಭ್ರವಾಗಿ ಸಮುದ್ರವೂ ನೆಲವೂ ಅಪೂರ್ವವಾದ ಸೌಂದರ್ಯದಿಂದ ಹೊಳೆದವು. ನಮ್ಮ ದ್ವೀಪವು ಗುಡ್ಡಗಾಡಿನ ಪ್ರದೇಶ. ಒಂದು ಕಡೆಯಲ್ಲಿ ಬೆಟ್ಟವು ತೀರಕ್ಕೆ ಬಲು ಹತ್ತಿರದವರೆಗೂ ಬಂದಿತ್ತು. ಬೆಟ್ಟದ ಇಳಿಜಾರಿನಲ್ಲಿ, ಕಣಿವೆಗಳಲ್ಲಿ, ಬಯಲಿನಲ್ಲಿ, ಎಲ್ಲಿ ನೋಡಿದರೂ ಕಣ್ಣಿಗೆ ಹಸುರಿನ ಹಬ್ಬ. ನಡುವೆ ನಾನಾ ಬಣ್ಣದ ಹೂವು ಹಣ್ಣುಗಳು ಮುತ್ತು ರತ್ನದ ಒಡವೆಗಳಂತೆ ಕಂಗೊಳಿಸಿದವು. ಅಲ್ಲಿದ್ದ ಮರಗಳಲ್ಲಿ ಯಾವುದರ ಹೆಸರೂ ನನಗೆ ಗೊತ್ತಿರಲಿಲ್ಲ. ತೆಂಗಿನ ಮರದ ಚಿತ್ರಗಳನ್ನು ಅನೇಕ ವೇಳೆ ನೋಡಿದ್ದುದರಿಂದ ಅದೊಂದನ್ನು ಮಾತ್ರ ಗುರುತಿಸಲು ಸಾಧ್ಯವಾಯಿತು. ಈ ಮನೋಹರವಾದ ಚಿತ್ರಕ್ಕೆ ಅಂಚು

ಕಟ್ಟಿದಂತೆ ಬಿಸಿಲಿನಲ್ಲಿ ಹೊಳೆಯುವ ಮರಳಿನ ತೀರ. ಅದರ ಮೇಲೆ ಸಣ್ಣ ಸಣ್ಣ ಅಲೆಗಳು ಬಂದು ಆಟವಾಡುವುವು. ನಮ್ಮ ಊರಿನ ಬಳಿ ಬಿರುಗಾಳಿಯೆದ್ದು ನಿಂತಮೇಲೂ ಅಲೆಗಳು ಬೆಟ್ಟದಂತೆ ಏರಿ ಬರುವು ದನ್ನು ನೋಡಿದ್ದೆ. ಇಲ್ಲಿ ಅಲೆಗಳು ಸೌಮ್ಯವಾಗಿದ್ದುದನ್ನು ಕಂಡು ಸ್ವಲ್ಪ ಆಶ್ಚರ್ಯವೇ ಆಯಿತು. ಆದರೆ ಸಮುದ್ರದ ಕಡೆ ಸ್ವಲ್ಪ ದೂರ ನೋಡಿದ ಮೇಲೆ ಅದಕ್ಕೆ ಕಾರಣ ತಿಳಿಯಿತು. ದಡದಿಂದ ಸುಮಾರು ಒಂದು ಮೈಲಿಯ ದೂರದಲ್ಲಿ ಅಲೆಗಳು ದೊಡ್ಡ ಹಸುರುಗೋಡೆಯಂತೆ ಭಯಂಕರವಾಗಿ ಗರ್ಜಿಸುತ್ತ ಬಂದು ಬಂಡೆಯ ಸಾಲಿನ ಮೇಲೆ ಅಪ್ಪ ಳಿಸಿ ಅಲ್ಲಿ ಒಡೆದು ನೊರೆನೊರೆಯಾಗಿ ಹರಡಿ, ತುಂತುರಿನ ಮೋಡವನ್ನು ಆಕಾಶಕ್ಕೆ ಎಸೆಯುವುವು. ಘಳಿಗೆ ಘಳಿಗೆಗೂ ಸುಂದರವಾದ ಮಳೆ ಬಿಲ್ಲು ಸೃಷ್ಟಿಯಾಗಿ, ಕ್ಷಣಕಾಲ ಕಂಗೊಳಿಸಿ ಮತ್ತೆ ಮಾಯವಾಗುವುದು. ಬಿರುಗಾಳಿಯೊಡನೆ ಹೆಣಗಾಡಿದ್ದ ಸಮುದ್ರವೇನೋ ಇನ್ನೂ ರೌದ್ರವಾ ಗಿಯೇ ಇತ್ತು. ಆದರೆ ದ್ವೀಪದ ಸುತ್ತಲೂ ಹಬ್ಬಿದ್ದ ಬಂಡೆಯ ಸಾಲು ಅದಕ್ಕೆ ತಡೆಯಾಗಿದ್ದರಿಂದ ಒಳಗಿನ ನೀರು ನೆಲಗಟ್ಟಿನ ಕೊಳದಂತೆ ಶಾಂತವಾಗಿತ್ತು.

ನಾವು ಈ ದೃಶ್ಯವನ್ನು ನೋಡಿ ಆನಂದ ಪಡುತ್ತಿದ್ದಾಗ "ಹುರ್ರಾ" ಎಂದು ಪೀಟರ್ ಕೂಗಿದ್ದು ಕೇಳಿಸಿತು. ಅವನು ನೀರಿನ ಹತ್ತಿರ ನಿಂತು ಮನಬಂದಂತೆ ಕಿರಿಚಿ, ಹುಚ್ಚು ಹಿಡಿದ ಕಪಿಯಂತೆ ಕುಣಿ ದಾಡುತ್ತಿದ್ದನು. ಮಧ್ಯೆ ಮಧ್ಯೆ ನೆಲದ ಮೇಲೆ ಬಿದ್ದಿದ್ದ ಏನೋ ಪದಾರ್ಥವನ್ನು ಹಿಡಿದೆಳೆಯುವಂತೆ ತೋರಿತು.

" ಶುದ್ಧ ಮಂಗ, ಈ ಪೀಟರ್ ! ಅದೇನು ವಿಷಯ, ನೋಡೋಣ ಬಾ, ರೋವರ್. "

"ಬನ್ನಿರೋ, ಮಕ್ಕಳಿರಾ, ಬನ್ನಿರಣ್ಣ. ಇಲ್ಲಿ ಏನು ಸಿಕ್ಕಿದೆ ಗೊತ್ತೆ?" ಎನ್ನುತ್ತಾ ಮತ್ತೆ ಮತ್ತೆ ಮುಕ್ಕಿರಿದು ಪೀಟರ್ ಏನನ್ನೋ ಎಳೆಯು ತ್ತಿದ್ದನು. ಹತ್ತಿರ ಹೋಗಿ ನೋಡಿದರೆ ಅವನಿಗೆ ಸಿಕ್ಕಿದ್ದುದು ನಮ್ಮ ಹುಟ್ಟು. ಜಾಕಿ ಅದನ್ನು ಕೊಡಲಿಯಿಂದ ಹೊಡೆದಾಗ ಕೊಡಲಿ ಅದ ರಲ್ಲಿಯೇ ಸಿಕ್ಕಿಕೊಂಡಿತಷ್ಟೆ. ಹುಟ್ಟಿನೊಡನೆ ಅದೂ ದಡಕ್ಕೆ ಪ್ರಯಾಣ

ಮಾಡಿ ಬಂದಿತ್ತು. ಪೀಟರ್ ಎಷ್ಟು ಎಳೆದರೂ ಅದನ್ನು ಬಿಡಿಸುವುದ ಕ್ಕಾಗಲಿಲ್ಲ. ಅದನ್ನು ನೋಡಿ ಜಾಕಿಗೆ ಬಹಳ ಸಂತೋಷವಾಯಿತು.

"ನಮ್ಮ ಅದೃಷ್ಟ ಒಳ್ಳೆಯದು, ಪೀಟರ್. ಸಾವಿರ ಚೂರಿ ಇದ್ದರೆ ತಾನೆ ಈ ಕೊಡಲಿಯ ಸಮಕ್ಕೆ ಬಂದಾವೆ! ನೋಡು, ಇದರ ಅಂಚು ಎಷ್ಟು ಹರಿತವಾಗಿದೆ!"

"ಹರಿತ ಹೇಗಾದರೂ ಇರಲಿ, ಆದರ ಹಿಡಿಯೇನೋ ಬಲವಾಗಿದೆ ಯಪ್ಪ. ಎಳೆದೂ ಎಳೆದೂ ನನ್ನ ತೋಳು ಕಿತ್ತು ಬಂದ ಹಾಗಿದೆ. ಇಲ್ಲಿ ನೋಡು, ಹುಟ್ಟಿನ ಸುತ್ತ ಕಬ್ಬಿಣದ ಪಟ್ಟಿ."

ಆ ಕಬ್ಬಿಣವೂ ನಮಗೆ ಬಹಳ ಉಪಯುಕ್ತವಾದ ವಸ್ತುವೇ. ಕೊಡಲಿಯ ಮೊನೆಯಿಂದ ಮೊಳೆಗಳನ್ನು ಕಿತ್ತು ಪಟ್ಟಿಯನ್ನು ಬಿಡಿಸಿ ಕೊಳ್ಳಬೇಕೆಂದು ಜಾಕಿ ಬಹಳ ಪ್ರಯತ್ನಮಾಡಿದ. ಆದರೆ ಮೊಳೆ ಬಹಳ ಭದ್ರವಾಗಿ ನಾಟಿಕೊಂಡಿತ್ತು. ಕೊಡಲಿ ಮೊಂಡಾಗಿ ಹೋಗಬಹು ದೆಂಬ ಭಯದಿಂದ ಆ ಕೆಲಸವನ್ನು ನಿಲ್ಲಿಸಬೇಕಾಯಿತು. ಹುಟ್ಟನ್ನು ಬೆಂಕಿಯಲ್ಲಿ ಸುಟ್ಟು ಆಮೇಲೆ ಕಬ್ಬಿಣವನ್ನು ಬಿಡಿಸಬಹುದೆಂದು ಅದನ್ನು ನಮ್ಮ ಬಂಡೆಯ ಬಳಿಗೆ ತೆಗೆದುಕೊಂಡುಹೋಗಿ ಇತರ ಸಾಮಾನುಗಳೊಡನೆ ಇಟ್ಟದ್ದಾಯಿತು.

"ಈಗ ದಡದ ಮೇಲೆಯೇ ನಡೆದು ಹಡಗು ಮುಳುಗಿದ ನೇರಕ್ಕೆ ಹೋಗೋಣ. ಇನ್ನೇನಾದರೂ ಸಾಮಾನು ತೇಲಿ ಬಂದು ಮರಳಿನ ಮೇಲೆ ಬಿದ್ದಿರಬಹುದು. ಅಲ್ಲಿಂದ ಬಂದ ಮೇಲೆ ಹೊಟ್ಟೆಯ ಪಾಡು ನೋಡಿಕೊಳ್ಳಬೇಕು" ಎಂದು ಜಾಕಿ ಸಲಹೆ ಮಾಡಿದ.

ನಾವು ಮರಳಿನ ಮೇಲೆ ಹೋಗುತ್ತಿದ್ದಾಗ ಪೀಟರಿಗೆ ಹಸಿವಿನ ಸಂಕಟ ಬಲವಾಯಿತೆಂದು ತೋರುತ್ತದೆ.

"ಅಲ್ಲವೋ ಜಾಕಿ, ಹೊಟ್ಟೆಯ ಪಾಡು ಅಂದೆಯಲ್ಲ, ಅದೇನು ಯೋಚನೆ ಮಾಡಿದ್ದೀ, ಹೇಳಬಾರದೆ? ಮರಗಳ ಮೇಲೆ ಹಣ್ಣೇನೋ ಬೇಕಾದ ಹಾಗೆ ಕಾಣುತ್ತೆ. ಆದರೆ ಅದು ತಿನ್ನಬಹುದಾದದ್ದೋ ಅಥವಾ ವಿಷವೋ, ಯಾರು ಬಲ್ಲರು? ಅದನ್ನು ತಿಂದು ಇಲ್ಲೇ ಪ್ರಾಣ ಒಪ್ಪಿಸ ಬೇಕಾದರೆ!"

" ಹೆದರ ಬೇಡ ಪೀಟರ್. ಇಲ್ಲಿರುವ ಹಣ್ಣುಗಳಲ್ಲಿ ಕೆಲವೇನೋ ನಮ್ಮೂರಿನಲ್ಲಿ ಬೆಳೆಯುವ ಹಣ್ಣುಗಳ ಹಾಗೆ ಕಾಣುತ್ತವೆ. ಅಲ್ಲದೆ ಹಕ್ಕಿಗಳು ಆ ಹಣ್ಣು ತಿನ್ನುತ್ತಾ ಇವೆ ನೋಡು. ಅವು ಪ್ರಾಣ ಒಪ್ಪಿಸದೆ ಇದ್ದರೆ ನಾವೂ ಒಪ್ಪಿಸಬೇಕಾಗಿಲ್ಲ. "

ಸ್ವಲ್ಪ ಮುಂದೆ ಕೆಲವು ತೆಂಗಿನ ಮರಗಳಿದ್ದವು.

" ನೋಡೋ ಪೀಟರ್, ಆ ಮರದಲ್ಲಿ ನಾವೆಲ್ಲಾ ತಿಂದು ತೇಗುವಷ್ಟು ಕಾಯಿಗಳಿವೆ. " ಅಷ್ಟು ಹೇಳಿದ್ದೇ ಪೀಟರಿಗೆ ಸಾಕಾಯಿತು. ಸರಸರನೆ ಮರವನ್ನು ಹತ್ತುವುದಕ್ಕೆ ಹೊರಟ.

" ಕಾಯಿಗಳು ಸದ್ಯಕ್ಕೆ ಹಾಗೇ ಇರಲಿ, ಪೀಟರ್. ನಮ್ಮ ಕೆಲಸ ಮುಗಿದ ಮೇಲೆ ತಿಂಡಿಯ ಯೋಚನೆ. "

" ಅಪ್ಪಣೆ, ಕ್ಯಾಪ್ಟನ್ ಸಾಹೇಬರೆ. ಈಗ ನನಗೆ ತಿಂಡಿಯ ಹಂಬಲು ಅಷ್ಟು ಹೆಚ್ಚಾಗಿಲ್ಲ. ಬಾಯಾರಿಕೆ ಮಾತ್ರ ತಡೆಯುವುದಕ್ಕಾಗುವುದಿಲ್ಲ. ಯಾರಾದರೂ ಒಂದು ಲೋಟ ನೀರು ಕೊಡುವುದಾದರೆ ಕೇಳಿದ ಬಹುಮಾನ ಕೊಡುತ್ತೇನೆ. . . . ಅಲ್ಲವೋ ಜಾಕಿ, ನೀನೇನು ಪ್ರಪಂಚದಲ್ಲಿರುವುದನ್ನೆಲ್ಲಾ ತಿಳಿದುಕೊಂಡಿರುವಹಾಗೆ ಕಾಣುತ್ತೆ? ದಕ್ಷಿಣ ಸಾಗರಕ್ಕೆ ಯಾವಾಗಲೂ ಬಂದಿಲ್ಲ ಅಂತ ಹೇಳಿದೆ. ಆದರೂ ಈ ಮರಗಳ ಹೆಸರೆಲ್ಲಾ ನಿನಗೆ ಹೇಗೆ ಗೊತ್ತಾಯಿತು ? "

ಜಾಕಿ ಸ್ವಲ್ಪ ನಕ್ಕ. "ಎಲ್ಲಾ ಮರದ ಹೆಸರೂ ಗೊತ್ತಿಲ್ಲ, ಪೀಟರ್. ನಾನು ಸರ್ವಜ್ಞನಲ್ಲ ಅಂತ ತಾನಾಗಿಯೇ ಗೊತ್ತಾಗುತ್ತೆ, ಸ್ವಲ್ಪ ತಾಳು. ಪ್ರಯಾಣದ ಕಥೆಗಳನ್ನು ಓದಿದ್ದೇನೆ. ಆದ್ದರಿಂದ ನಿನಗೆ ತಿಳಿಯದೆ ಇರುವ ವಿಷಯ ನನಗೆ ಸ್ವಲ್ಪ ತಿಳಿದಿರಬಹುದು. "

" ಪೆದ್ದು ಪೆದ್ದಾಗಿ ಮಾತಾಡಬೇಡ. ನೀನು ಬಹಳ ಬುದ್ಧಿವಂತ ಅಂದುಕೊಂಡು ನಾನು ಸ್ವಲ್ಪ ಮರ್ಯಾದೆ ಇಟ್ಟುಕೊಂಡಿದೇನೆ. ಬರಿಯ ಪುಸ್ತಕಪಿಶಾಚಿ ಅಂತ ಹೇಳಿಕೊಂಡು ಆ ಮರ್ಯಾದೆ ಕಳೆದುಕೊಳ್ಳಬೇಡ. "

" ಹಾಗೋ, ತಾಳು ನೋಡೋಣ. " ಅಲ್ಲಿಯೇ ನಿಂತುಕೊಂಡು ಜಾಕಿ ತೆಂಗಿನ ಮರಗಳ ಕಡೆ ನೋಡಿದ. " ಪೀಟರ್, ' ಬಹಳ ಬಾಯಾ

ರಿಕೆ, ಒಂದು ಲೋಟ ನೀರಿಗೆ ಏನು ಬೇಕಾದರೂ ಕೊಡುತ್ತೇನೆ' ಅಂತ ಹೇಳಿದೆಯಲ್ಲ, ನೀರಿಗೆ ಬದಲಾಗಿ ಪಾನಕ ಕೊಟ್ಟರೆ ಆಗಬಹುದೊ?"

"ಹೇಗಾದರೂ ಸೇರಿಸಿಕೊಂಡು ಕುಡಿಯುತ್ತೇನೆ."

"ಇರಲಿ, ಈ ಮರ ಹತ್ತಿ ಒಂದೆರಡು ಕಾಯಿ ತೆಗೆದುಕೊಂಡು ಬಾ ನೋಡೋಣ. ಕೆಂಪಗೆ ಹಣ್ಣಾಗಿರುವ ಕಾಯಿ ಬೇಡ. ಸ್ವಲ್ಪ ಹಸುರಾಗಿರುವುದಾಗಬೇಕು."

ಪೀಟರಿಗೆ ಆಶ್ಚರ್ಯವಾಗಿ ಜಾಕಿ ಹಾಸ್ಯ ಮಾಡುತ್ತಿದ್ದಾನೆಯೋ ಎಂಬ ಸಂದೇಹ ಬಂತು. ಆದರೂ ಮರ ಹತ್ತಿ ಎರಡು ಕಾಯನ್ನು ತಂದ.

"ಅದರ ತುದಿಯಲ್ಲಿ ಒಂದು ರಂಧ್ರ ಹೊಡೆದು ಅದನ್ನು ಬಾಯಿಗಿಟ್ಟುಕೊ."

ಒಂದು ಗುಟುಕು ನೀರನ್ನು ಕುಡಿದ ಮೇಲೆ ಪೀಟರಿನ ಆಶ್ಚರ್ಯಕ್ಕೂ ಸಂತೋಷಕ್ಕೂ ಮಿತಿಯಿಲ್ಲ. ಬಾಯಿತುಂಬ ಎಳನೀರು ತುಂಬಿಕೊಂಡು ಗುಟುಕಿಸುತ್ತಿರುವಾಗಲೇ ನಮ್ಮ ಕಡೆ ನೋಡಿ "ಬಹಳ ಚೆನ್ನಾಗಿದೆ" ಎನ್ನುವಂತೆ ತಲೆ ಕುಣಿಸಿ, ಕಣ್ಣು ಮಿಟುಕಿಸಿ ವಿಚಿತ್ರವಾಗಿ ಮುಖ ಮಾಡಿದ್ದನ್ನು ನೋಡಿ ನಮ್ಮಿಬ್ಬರಿಗೂ ವಿಪರೀತ ನಗು ಬಂತು. ಎಳನೀರನ್ನು ಪೂರ್ತಿ ಹೀರಿದ ಮೇಲೆ ದೀರ್ಘವಾಗಿ ಉಸಿರು ಬಿಟ್ಟ.

"ಜಾಕಿ, ನಿನಗೇನು ಬೇಕು, ಕೇಳಿಕೊ. ಒಂದು ಜಹಗೀರಿ ಕೊಡಲೆ? ಸಾವಿರ ವರ್ಷ ತಣ್ಣಗೆ ಬದುಕು ಮಹಾರಾಯ . . . ಸುಮ್ಮನೆ ಕೂತಿದೀರಲ್ಲೋ, ಅದರ ರುಚಿ ನೋಡಬಾರದೆ? ಅಮೃತ!"

ಇನ್ನೊಂದು ಎಳನೀರನ್ನು ಕೆತ್ತಿ ನಾನೂ ಕುಡಿದೆ. ನೀರು ತಣ್ಣಗಿದ್ದುದಲ್ಲದೆ ಬಹಳ ಸಿಹಿಯಾಗಿತ್ತು. ಜಾಕಿ ತಾನೂ ಕುಡಿದು ಪೀಟರನ ಕಡೆಗೆ ತಿರುಗಿದ.

"ಈಗೇನು ಹೇಳುತ್ತೀಯೆ, ಪೀಟರ್? ಇದುವರೆಗೆ ನಾನು ತೆಂಗಿನಮರ ನೋಡಿರಲಿಲ್ಲ; ಎಳನೀರನ್ನು ಕುಡಿದಿರಲಿಲ್ಲ. ಎಳೆಯ ತೆಂಗಿನ ಕಾಯಿನಲ್ಲಿ ನೀರಿರುತ್ತೆ ಅಂತ ಪುಸ್ತಕದಲ್ಲಿ ಓದಿದ್ದೆ, ಅಷ್ಟೆ. ಪುಸ್ತಕಪಿಶಾಚಿಗೆ ಸಲಾಮು ಹಾಕುತ್ತೀಯೋ ಇಲ್ಲವೊ?"

"ಆಗಬಹುದು ಸ್ವಾಮಿ. ಹಣ್ಣಾದ ಕಾಯಿನಲ್ಲಿ ಏನಿರುತ್ತೆ, ಅಪ್ಪಣೆ ಕೊಡಿಸುತ್ತೀರಾ ?"

"ಅದರೊಳಗೆ ಬೆಳ್ಳಗಿರುವ ತಿರುಳಿರುತ್ತೆ. ಮಧ್ಯದಲ್ಲಿ ಸ್ವಲ್ಪ ನೀರೂ ಇರುತ್ತೆ. ಆದರೆ ಅದರಿಂದ ಬಾಯಾರಿಕೆ ಇಂಗುವುದಿಲ್ಲ. ಕಾಯಿ ಮಾತ್ರ ತಿನ್ನುವುದಕ್ಕೆ ಬಹಳ ರುಚಿಯಾಗಿರುತ್ತೆ."

"ಒಂದೇ ಮರದಲ್ಲಿ ತಿಂಡಿ ತೀರ್ಥ ಎರಡೂ ಸಿಕ್ಕುತ್ತೆಯೆ! ರೋವರ್, ಇದು ಬರಿಯ ಹವಳದ ದ್ವೀಪವಲ್ಲ. ಹಿಂದೆ ಸ್ವರ್ಗ ಅಂತ ಕಥೆ ಹೇಳುತ್ತಿದ್ದರಲ್ಲ, ಇದೇ ಆ ಸ್ವರ್ಗ. ಸಮುದ್ರದಲ್ಲಿ ಸ್ನಾನ; ಇಲ್ಲೇ ಒಂದು ಗುಡಿಸಲು ; ಮರದ ಮೇಲೆ ಊಟ ತಿಂಡಿ–ಇನ್ನೇನಾಗಬೇಕು?"

ಪೀಟರ್ ತನ್ನ ಟೋಪಿಯನ್ನು ಆಕಾಶಕ್ಕೆ ಎಸೆದು ಮರಳಮೇಲೆ ಕುಣಿದಾಡಿದನು.

ನಮಗೆ ಮತ್ತೆ ಯಾವ ಸಾಮಾನೂ ಸಿಕ್ಕಲಿಲ್ಲ. ಪುನಃ ನಮ್ಮ ಬಂಡೆಗೆ ಬರುವ ಹೊತ್ತಿಗೆ ಸಂಜೆಯಾಗಿ ಕತ್ತಲೆ ಸ್ವಲ್ಪ ಸ್ವಲ್ಪವಾಗಿ ಕಾಲಿಡುತ್ತಿತ್ತು. ಇನ್ನೂ ಬೆಳಕಿರುವಾಗಲೇ ನಾವು ಮೂವರೂ ಸೇರಿ ಮರದ ಕೊಂಬೆಗಳನ್ನೂ ಎಲೆಗಳನ್ನೂ ಕಡಿದು ಒರಟೊರಟಾಗಿ ಒಂದು ಗುಡಿಸಲನ್ನು ಕಟ್ಟಿದೆವು. ಚಳಿಗಾಳಿಗಳಿಲ್ಲದೆ ಹವ ಹಿತಕರವಾಗಿದ್ದು ದರಿಂದ ಬಯಲಿನಲ್ಲೇ ಮಲಗಿ ರಾತ್ರಿಯನ್ನು ಕಳೆಯಬಹುದಾಗಿತ್ತು. ಆದರೆ ನಮ್ಮಲ್ಲಿ ಯಾರಿಗೂ ತಲೆಯ ಮೇಲೆ ನೆರಳಿಲ್ಲದೆ ಮಲಗಿ ಅಭ್ಯಾಸ ವಿರಲಿಲ್ಲ; ಅಲ್ಲದೆ ರಾತ್ರಿಯೇನಾದರೂ ಇಬ್ಬನಿ ಬಿದ್ದರೆ ಅಥವಾ ಮಳೆ ಬಂದರೆ ಆಶ್ರಯ ಬೇಕಾಗುತ್ತಿತ್ತು. ನೆಲದ ಮೇಲೆ ಎಲೆಗಳನ್ನೂ ಒಣಗಿದ ಹುಲ್ಲನ್ನೂ ಹಾಸಿ ಸಿದ್ಧಮಾಡುವಹೊತ್ತಿಗೆ ಆಗಲೇ ಕತ್ತಲಾ ಗಿತ್ತು. ಇನ್ನು ಆಹಾರದ ಯೋಚನೆ. ಅದಕ್ಕಿಂತ ಮೊದಲು ಬೆಂಕಿ ಹೊತ್ತಿಸುವುದು ಹೇಗೆ ಎಂಬ ಸಮಸ್ಯೆ. ಅಲ್ಲೇನೂ ಬೆಂಕಿಯ ಕಡ್ಡಿ ಸಿಕ್ಕುವಂತಿಲ್ಲವಷ್ಟೆ.

"ಒಳ್ಳೆಯ ಸಂಕಟ ಬಂತಲ್ಲ, ಏನು ಮಾಡೋಣ ?" ಎಂದು ಪೀಟರ್ ಜಾಕಿಯ ಕಡೆಗೆ ನೋಡಿದ. ಏನು ತೊಂದರೆಯಾದರೂ ಜಾಕಿಯ ಮರೆ ಹೋಗುವುದು ಅಭ್ಯಾಸವಾಗುತ್ತ ಬಂತು.

ಅವನಿಗೂ ಯಾವ ಉಪಾಯವೂ ತೋರಲಿಲ್ಲ. " ನಮ್ಮ ಹತ್ತಿರ ಚಕಮುಕಿ ಹತ್ತಿಯೇನೋ ಇದೆ. ಸುತ್ತಮುತ್ತ ಕಲ್ಲುಗಳೂ ಬಿದ್ದಿವೆ. ಆದರೆ ಉಕ್ಕಿನ ತುಂಡಿಲ್ಲದೆ ಬೆಂಕಿ ಹತ್ತುವುದಿಲ್ಲ. ಪ್ರಯತ್ನ ಮಾಡ ಬಹುದು." ಎಂದು ಎರಡು ಕಲ್ಲನ್ನು ಒಂದಕ್ಕೊಂದು ಹೊಡೆದು ನೋಡಿ ದನು. ಅದರಿಂದೇನೂ ಫಲವಾಗಲಿಲ್ಲ.

ಪೀಟರಿಗೆ ಇದ್ದಕ್ಕಿದ್ದ ಹಾಗೆಯೇ ಬುದ್ಧಿ ಚುರುಕಾಯಿತು.

" ನಾನು ಉಪಾಯ ಹೇಳಿಕೊಡುತ್ತೇನೆ, ಕೇಳಿ. ನಮ್ಮ ಟೆಲಿಸ್ಕೋಪಿನ ತುದಿಯಲ್ಲಿ ಭೂತಕನ್ನಡಿಯಿದ್ದೇ ಇದೆ. ಅದನ್ನು . . ."

" ಸರಿಯೆ, ಈಗ ರಾತ್ರಿಯ ಹೊತ್ತು. ಆದರೂ ನೀನು ಬಾ ಅಂದರೆ ಸೂರ್ಯ ಬರದೇ ಇರುತ್ತಾನೆಯೆ! ಬೆಂಕಿ ಸಿಕ್ಕಿದ ಹಾಗೆಯೇ! "

ಪೀಟರ್ ಮಾತೇ ಆಡಲಿಲ್ಲ. ಜಾಕಿ ಸ್ವಲ್ಪ ಹೊತ್ತು ಯೋಚಿಸಿ ಕೊನೆಗೆ " ಭಯವಿಲ್ಲ, ಬೆಂಕಿಮಾಡಿಕೊಡುತ್ತೇನೆ" ಎಂದು ಒಂದು ಗಿಡದ ಸಣ್ಣ ಕೊಂಬೆಯನ್ನು ಕತ್ತರಿಸಿ ಎಲೆಗಳನ್ನು ಸವರಿಹಾಕಿದನು. " ಹೀಗೆ ಬೆಂಕಿ ಮಾಡುವ ವಿಧಾನವನ್ನು ಎಲ್ಲೋ ಓದಿದ್ದೆ. ಎಲ್ಲಿ, ಆ ಹುರಿಯನ್ನು ಕೊಡು.'' ಎನ್ನುತ್ತಾ ಹುರಿಯನ್ನು ಕೊಂಬೆಗೆ ಕಟ್ಟಿ ಒಂದು ಬಿಲ್ಲನ್ನು ತಯಾರು ಮಾಡಿದನು. ಅನಂತರ ಒಣಗಿ ಬಿದ್ದಿದ್ದ ದಪ್ಪ ಕಡ್ಡಿಯೊಂದನ್ನು ತೆಗೆದುಕೊಂಡು ಅದರ ತುದಿಗಳನ್ನು ಬಾಣ ದಂತೆ ಮೊನಚುಮಾಡಿ, ಅದನ್ನು ಬಿಲ್ಲಿನ ನಾರಿಗೆ ಸಿಕ್ಕಿಸಿದನು. ನಮ್ಮಲ್ಲಿದ್ದ ಚಕಮುಕಿ ಹತ್ತಿಯನ್ನು ಮರದ ಚೂರಿನ ಮೇಲಿಟ್ಟು ಬಾಣದ ತುದಿಯನ್ನು ಅದಕ್ಕೆ ಚುಚ್ಚಿದಂತೆ ಮಾಡಿ ಬಿಲ್ಲಿನ ಸಹಾಯ ದಿಂದ ಅದನ್ನು ಬೈರಿಗೆ ತಿರುಗಿಸಿದಂತೆ ಒಂದೇ ಸಮನೆ ವೇಗವಾಗಿ ತಿರುಗಿಸಿದನು. ಅರ್ಧ ನಿಮಿಷದೊಳಗೆ ಹತ್ತಿ ಹೊಗೆಯಾಡಿತು. ಒಂದು ನಿಮಿಷದೊಳಗೆ ಉರಿ ಕಾಣಿಸಿತು. ಕಾಲು ಘಂಟೆಯೊಳಗೆ ಸಮಾರಾಧನೆ ಅಡಿಗೆಗಾದರೂ ಆಗುವಷ್ಟು ದೊಡ್ಡ ಬೆಂಕಿಯನ್ನು ಹತ್ತಿಸಿ ಅದರ ಸುತ್ತಲೂ ತೆಂಗಿನಕಾಯಿ ತಿನ್ನುತ್ತಾ ಕುಳಿತೆವು. ಬೆಂಕಿಯ ಜ್ವಾಲೆ ಚಿಟಗುಟ್ಟುತ್ತಾ ನಮ್ಮ ಪರ್ಣಶಾಲೆಯನ್ನು ಬೆಳಕಿ ನಿಂದ ತೊಳಗಿತು.

ಅಂದು ರಾತ್ರಿ ನಮ್ಮ ಎಲೆಛಾವಣಿಯ ನಡುವೆ ಇಣಕಿ ನೋಡು ತ್ತಿದ್ದ ನಕ್ಷತ್ರಗಳೇ ನಮ್ಮ ರಕ್ಷಣೆಗೆ ಕಾವಲು; ದೂರದಿಂದ ಕೇಳಿಬರು ತ್ತಿದ್ದ ಸಮುದ್ರದ ಗರ್ಜನೆಯೇ ನಮ್ಮ ಜೋಗುಳ.

## ೩
## ಬೆಟ್ಟದ ಮೇಲೆ

ಮಾರನೆಯ ದಿನ ಬೆಳಗ್ಗೆ ಸೂರ್ಯನ ಕಿರಣಗಳು ಎಲೆಗಳ ನಡುವೆ ತೂರಿಬಂದು ನನ್ನ ಮುಖವನ್ನು ಮುತ್ತಿದವು. ಮೈ ಕೈ ಹಗುರವಾಗಿ, ಮನಸ್ಸು ಉಲ್ಲಾಸವಾಗಿ, ಕಣ್ಣು ತೆರೆಯುವುದೇ ಒಂದು ಸೌಭಾಗ್ಯವೆನ್ನಿಸಿತು. ಆ ಸುಖವನ್ನು ಸವಿಯುತ್ತಾ ಸ್ವಲ್ಪ ಹೊತ್ತು ಸುಮ್ಮನೆ ಮಲಗಿದ್ದೆ. ಪೀಟರ್ ಮಲಗಿದ್ದ ಕಡೆಗೆ ಬಾಗಿದ್ದ ಸಣ್ಣ ದೊಂಗೆ ಕೊಂಬೆಯ ಮೇಲೆ ಒಂದು ಗಿಣಿ ತನ್ನ ಪಂಚವರ್ಣದ ಗರಿ ಗಳನ್ನು ಮೆರೆಯಿಸುತ್ತ ಕುಳಿತಿತ್ತು. ಆ ಕಡೆ ಈ ಕಡೆ ಕಣ್ಣು ತಿರು ಗಿಸುತ್ತಿದ್ದು ಕೊನೆಗೆ ಕೆಳಕ್ಕೆ ಬಗ್ಗಿತು. ಪೀಟರ್ ಬಾಯಿ ತೆರೆದು ಕೊಂಡು ನಿದ್ರಿಸುತ್ತಿದ್ದ. ಗಿಣಿ ಅವನ ಬಾಯೊಳಕ್ಕೆ ಇಣಿಕಿನೋಡು ತ್ತಿತ್ತು; ಅದರ ಕಾಲೇನಾದರೂ ಜಾರಿದ್ದರೆ ಸರಿಯಾಗಿ ಪೀಟರನ ಬಾಯಿಗೇ ಬೀಳುತ್ತಿತ್ತು. ನಾನು ಹೀಗೆಂದುಕೊಳ್ಳುವ ಹೊತ್ತಿಗೆ ಸರಿ ಯಾಗಿ ಅದು ಇನ್ನೂ ಸ್ವಲ್ಪ ಕೆಳಕ್ಕೆ ಬಾಗಿ ಅವನ ಮುಖದ ಹತ್ತಿರ ದಲ್ಲೇ ಒಂದು ಕೂಗು ಹಾಕಿತು. ಪೀಟರ್ ಬೆದರಿ ಮೇಲಕ್ಕೆ ನೆಗೆ ದನು. ಆ ಹುಚ್ಚು ಗಿಣಿ ಹಾರಿ ಹೋಯಿತು.

"ಆ ಹಕ್ಕಿಯ ದಿಟ್ಟತನ ನೋಡಿದೆಯಾ!" ಎನ್ನುತ್ತ ಪೀಟರ್ ಕಣ್ಣು ಹೊಸಕಿಕೊಂಡು "ಘಂಟೆಯೆಷ್ಟು?" ಎಂದು ಕೇಳಿದ.

"ಸಮುದ್ರದ ತಳಕ್ಕೆ ಹೋಗಿ ನೋಡಬೇಕು; ನನ್ನ ಗಡಿಯಾರ ಅಲ್ಲಿದೆ."

ತಾನು ಎಲ್ಲಿದ್ದೇನೆನ್ನುವುದು ಪೀಟರಿಗೆ ಆಗ ನೆನಪಾಯಿತು.

ಎದ್ದು ಒಂದು ಬಾರಿ ಆಕಾಶದ ಕಡೆಗೂ ಸಮುದ್ರದ ಕಡೆಗೂ ತಿರುಗಿ ನೋಡಿ, ಬೇಗಬೇಗನೆ ತನ್ನ ಬಟ್ಟೆಗಳನ್ನು ಕಿತ್ತೊಗೆದು "ಹುರ್ರಾ" ಎಂದು ಕೂಗುತ್ತಾ ಓಡಿಹೋಗಿ ನೀರಿಗೆ ನೆಗೆದನು. ಅವನ ಕೂಗಿ ನಿಂದ ಜಾಕಿಗೂ ಎಚ್ಚರವಾಯಿತು. ಪೀಟರ್ ಈಜುವುದಕ್ಕೆ ಹೋದು ದನ್ನು ಕಂಡು ಅವನೂ ಓಡಿಹೋಗಿ ನೀರಿಗೆ ಬಿದ್ದನು. ಅವನು ಈಜುವುದರಲ್ಲೂ ಮುಳುಗುವುದರಲ್ಲೂ ಪ್ರವೀಣ. ನಾನೂ ನಿಧಾನ ವಾಗಿ ಅವರನ್ನು ಹಿಂಬಾಲಿಸಿದೆ. ನನಗೂ ಈಜುವುದೂ ಮುಳುಗು ವುದೂ ಚೆನ್ನಾಗಿ ಬರುತ್ತದೆ. ಪೀಟರ್ ಸ್ವಲ್ಪಮಟ್ಟಿಗೆ ಈಜು ಕಲಿತಿದ್ದ ನಾದರೂ ಮುಳುಗುವುದು ಏನೇನೂ ಬರುತ್ತಿರಲಿಲ್ಲ. ಅವನು ದಡದ ಹತ್ತಿರವೇ ಈಜಲೆಂದು ಬಿಟ್ಟು ನಾನು ಜಾಕಿಯೊಡನೆ ಆಳವಾದ ನೀರಿಗೆ ಹೋದೆ. ಚೆನ್ನಾಗಿ ಬಿಸಿಲು ಕಾಯುತ್ತಿದ್ದುದರಿಂದ ಶೀತವಾಗುವ ಭಯ ವೇನೂ ಇಲ್ಲದೆ ನಾವು ಎರಡು ಮೂರು ಘಂಟೆಯಕಾಲ ನೀರಿನಲ್ಲಿಯೇ ಇದ್ದೆವು. ಇಪ್ಪತ್ತು ಮೂವತ್ತು ಅಡಿ ಆಳವಿದ್ದರೂ ನೀರು ಶಾಂತ ವಾಗಿದ್ದುದರಿಂದ ಸಮುದ್ರದ ತಳ ಕಾಣುತ್ತಿತ್ತು. ಮುಳುಗಿ ನೋಡಿದರೆ ಅಲ್ಲಿಯೇ ಸೊಗಸಾದ ಉಪವನವಿದ್ದಂತೆ ತೋರಿತು. ಎಲ್ಲಾ ಕಡೆ ಯಲ್ಲೂ ವಿಚಿತ್ರಾಕಾರದ ವಿವಿಧ ಬಣ್ಣದ ಹವಳಗಳು ತುಂಬಿದ್ದವು. ಸುಂದರವಾದ ತೆಳುಗೆಂಪಿನ ಬಣ್ಣದಿಂದ ಕೂಡಿ ಗಿಡಗಳಂತೆ ಕೊಂಬೆ ಯಾಗಿ ಪೊರಟಿದ್ದ ಹವಳಗಳೇ ಹೆಚ್ಚು. ಅವುಗಳ ಮೇಲೆ ಬೇರೆ ಬೇರೆ ಜಾತಿಯ ಸಮುದ್ರದ ಬಳ್ಳಿಗಳು ಬೆಳೆದು ಗಿಡದಿಂದ ಗಿಡಕ್ಕೆ ತೋರಣ ಕಟ್ಟಿದಂತಿತ್ತು. ನಡುವೆ ಕೆಂಪು, ನೀಲಿ, ಹಳದಿಯ ಮೀನು ಗಳು ಓಡಾಡುತ್ತಿದ್ದುವು.

ಸ್ನಾನ ಮುಗಿದ ಮೇಲೆ ಮತ್ತೆ ನಮ್ಮ ಗುಡಿಸಲಿಗೆ ಬಂದು, ಭೂತಕನ್ನಡಿಯ ಸಹಾಯದಿಂದ ಬೆಂಕಿಹತ್ತಿಸಿ, ಸಮುದ್ರದ ತಳದಿಂದ ಆರಿಸಿ ತಂದಿದ್ದ ಚಿಪ್ಪು ಮೀನುಗಳನ್ನು ಬೇಯಿಸಿದೆವು. ಅದೇ ನಮಗೆ ಬೆಳಗಿನ ಆಹಾರ.

ತಿಂಡಿಯ ಯೋಚನೆ ಕಳೆದಮೇಲೆ ನಮ್ಮ ಗುಡಿಸಲಿನ ಹತ್ತಿರವೇ ಇದ್ದ ಬೆಟ್ಟವನ್ನು ಹತ್ತಿ ಆ ದ್ವೀಪದ ಸ್ವರೂಪವೇನೆಂದು ತಿಳಿದು

ಕೊಳ್ಳಲು ಹೊರಟೆವು. ಸಮುದ್ರದ ದಡವನ್ನೇ ಅನುಸರಿಸಿ ಸ್ವಲ್ಪ ದೂರ ನಡೆದ ಮೇಲೆ ಕಣಿವೆಯೊಂದರಿಂದ ಹರಿದು ಬರುತ್ತಿದ್ದ ಸಣ್ಣ ತೊರೆ ಸಿಕ್ಕಿತು. ಅಲ್ಲಿಂದ ನಾವು ತೀರವನ್ನು ಬಿಟ್ಟು ಕಣಿವೆಯ ಮೂಲಕ ದ್ವೀಪದ ಒಳಭಾಗವನ್ನು ಪ್ರವೇಶಿಸಿದೆವು. ನಮ್ಮ ಇಕ್ಕೆಲದಲ್ಲಿಯೂ ಎತ್ತರವಾದ ಬೆಟ್ಟಗಳು. ಕಣಿವೆಯಲ್ಲಿ ಬೇಕಾದಷ್ಟು ಮರಗಳೂ ಪೊದೆಗಳೂ ಇದ್ದುದರಿಂದ ಮುಂದುವರಿಯುವುದು ಸ್ವಲ್ಪ ಕಷ್ಟವೇ ಆದರೂ ಪ್ರಕೃತಿಯ ಸೌಂದರ್ಯವನ್ನು ನೋಡುವುದರಲ್ಲಿ ನಮ್ಮ ಆಯಾಸ ಮರೆತೇ ಹೋಯಿತು. ಸುಮಾರು ಅರ್ಧಘಂಟೆ ತೊರೆಯ ದಡದಲ್ಲೇ ನಡೆದು ಗಿಡಮರಗಳು ಹೆಚ್ಚಿಲ್ಲದೆ ಬರಿಯ ಕಲ್ಲುಗಳಿದ್ದ ಒಂದು ಸ್ಥಳವನ್ನು ಹುಡುಕಿ ಅಲ್ಲಿಂದ ಬೆಟ್ಟವನ್ನು ಏರಿದೆವು. ಜಾಕಿ ನಮಗಿಂತ ಶಕ್ತಿವಂತನೂ ಧೈರ್ಯಸ್ಥನೂ ಆದ್ದರಿಂದ ಅವನನ್ನೇ ಮುಂದೆ ಬಿಟ್ಟೆವು. ಅವನ ಹಿಂದೆ ಪೀಟರ್. ಹಿಂಗಾವಲಿಗೆ ನಾನು.

ಹೀಗೆ ಒಂದು ಫರ್ಲಾಂಗು ದೂರ ಹೋದಮೇಲೆ ಜಾಕಿ ದೊಡ್ಡ ಎಲೆಗಳುಳ್ಳ ಮರವೊಂದನ್ನು ತೋರಿಸಿ " ಆ ಮರವನ್ನು ನೋಡಿದಿರಾ? ಅದಕ್ಕೆ ಬ್ರೆಡ್‌ಮರವೆಂದು ಹೆಸರು. ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾದ ಮರ '' ಎಂದನು.

ಪೀಟರ್ " ನಾನು ಪ್ರಪಂಚಕ್ಕೆ ಸೇರಿದವನಲ್ಲವೇನೊ. ಅದರ ಪ್ರಸಿದ್ಧಿ ನನ್ನ ಕಿವಿಯವರೆಗೆ ಬಂದಿಲ್ಲ '' ಎಂದನು.

" ಅಯ್ಯೋ ಪೆದ್ದಭಟ್ಟ! ಈಗಲಾದರೂ ಅದರ ವಿಷಯ ತಿಳಿದುಕೊ. ಈ ಮರ ದಕ್ಷಿಣ ಸಾಗರದ ದ್ವೀಪಗಳಲ್ಲೆಲ್ಲಾ ಹೇರಳವಾಗಿ ಬೆಳೆಯುತ್ತದೆ. ವರ್ಷಕ್ಕೆ ಮೂರು ಸಾರಿ ಫಲಬಿಡುತ್ತದೆ. ಇದರ ಹಣ್ಣು ಬೇಯಿಸಿ ಒಳ್ಳೆಯ ರುಚಿಯಾದ ರೊಟ್ಟಿಮಾಡಬಹುದು. ಅದರಿಂದಲೇ ಈ ಮರಕ್ಕೆ ಬ್ರೆಡ್‌ಮರ ಎನ್ನುವ ಹೆಸರು ಬಂದದ್ದು."

'' ಈಗ ತಾನೆ ನಾನು ಬ್ರೆಡ್ ಜ್ಞಾಪಿಸಿಕೊಳ್ಳುತ್ತಿದ್ದೆ. ಎಂಥ ದ್ವೀಪವಯ್ಯಾ ಇದು ! ಏನು ಬೇಕು ಅಂದರೂ ಸಿಕ್ಕುತ್ತೆ. ನಮ್ಮೂರಿನಲ್ಲಿ ಲೆಮನೇಡ್ ಮಂತಾದ್ದನ್ನು ಸೀಸೆಗಳಲ್ಲಿ ತುಂಬಿಡುವಂತೆ ಇಲ್ಲಿ ಕಾಯಿಗಳಲ್ಲಿ ತುಂಬಿಟ್ಟಿದಾರೆ. ಮರದಮೇಲೆ ಬ್ರೆಡ್ ಬೆಳೆದು ಸಿದ್ಧವಾಗಿದೆ !"

" ನಿಜ, ಇಲ್ಲಿ ಸಿಕ್ಕುವ ಪದಾರ್ಥಗಳನ್ನು ಬುದ್ಧಿವಂತಿಕೆಯಿಂದ ಉಪಯೋಗಿಸಿಕೊಂಡರೆ ನಾವು ಸುಖವಾಗಿ ಜೀವನ ಮಾಡಬಹುದು.''

'' ಅದೆಲ್ಲಾ ಸರಿಯೆ ; ಆದರೆ ಇದೇ ಬ್ರೆಡ್‌ಮರ ಅಂತ ಚೆನ್ನಾಗಿ ಗೊತ್ತು ತಾನೆ ? ಇಲ್ಲವೆ ತಪ್ಪು ತಿಳಿದುಕೊಂಡು ಆಕಾಶದ ಅರಮನೆ ಕಟ್ಟುತ್ತಾ ಇದ್ದೀಯೊ ?"

" ಸಂದೇಹವೇನೂ ಇಲ್ಲ. ಈ ಮರದ ವರ್ಣನೆ ಓದಿದ್ದು ಚೆನ್ನಾಗಿ ನೆನಪಿದೆ. ಓದಿದ್ದೆಲ್ಲಾ ನೆನಪಿದ್ದರೆ ಇನ್ನೂ ಎಷ್ಟೋ ಮರಗಳನ್ನು ಗುರುತಿಸಬಹುದು. ನಾನು ಸರ್ವಜ್ಞನಲ್ಲ ಅಂತ ಆಗಲೇ ಹೇಳಲಿಲ್ಲವೆ ? "

ವಯಸ್ಸಾದವರು ಹುಡುಗರನ್ನು ಹೊಗಳಿ ಉತ್ತೇಜನ ಕೊಡುವಂತೆ ಪೀಟರ್ ಜಾಕಿಯ ಬೆನ್ನು ತಟ್ಟಿದ. " ಪರವಾಯಿಲ್ಲ, ಮಗು. ನಿನ್ನ ವಯಸ್ಸಿಗೆ ಮೀರಿದ ತಿಳಿವಳಿಕೆ ಸಂಪಾದಿಸಿದ್ದೀಯೆ. ಹುಡುಗನಾದರೂ ಬುದ್ಧಿಶಾಲಿ. ಹೀಗೇ ವ್ಯಾಸಂಗ ಮಾಡುತ್ತಾ ಇದ್ದರೆ ಅಭಿವೃದ್ಧಿಗೆ ಬರು . . . "

ಪೀಟರ್ ಮಾತು ಮುಗಿಸುವುದರೊಳಗೆ ಜಾಕಿ ಅವನನ್ನು ನೂಕಿ ಮೃದುವಾದ ಎಲೆಗಳಿದ್ದ ಪೊದೆಯ ಮೇಲೆ ಬೀಳಿಸಿದನು. ಅಲ್ಲಿ ಸುಪ್ಪತ್ತಿಗೆಯಂತೆ ಸುಖವಾಗಿದ್ದದ್ದರಿಂದ ಪೀಟರ್ ಬಿಸಿಲು ಕಾಯಿಸುತ್ತ ಅಲ್ಲಿಯೇ ಮಲಗಿದ. ನಾವಿಬ್ಬರೂ ಬ್ರೆಡ್ ಮರವನ್ನು ಪರೀಕ್ಷಿಸುತ್ತ ನಿಂತೆವು. ಅದರ ಬುಡ ಎರಡಡಿ ದಪ್ಪವಿರಬಹುದು. ಸುಮಾರು ಇಪ್ಪತ್ತು ಅಡಿಯವರೆಗೂ ನೀಳವಾಗಿ ಬೆಳೆದು ಅಲ್ಲಿಂದ ಮೇಲೆ ಸುಂದರವಾಗಿ ಕೊಂಬೆಗಳು ಹರಡುತ್ತವೆ. ಎಲೆಗಳು ಹತ್ತು ಹನ್ನೆರಡು ಅಂಗುಲ ದಷ್ಟು ಉದ್ದವಾಗಿ ಅಂಚಿನಲ್ಲಿ ಗರಗಸದಂತೆ ಹಲ್ಲುಹಲ್ಲಾಗಿವೆ. ಸ್ವಲ್ಪ ಕಪ್ಪು ಮಿಶ್ರವಾದ ಹಸುರು ಬಣ್ಣ. ಮರದ ತುಂಬ ಹಸುರುಗಾಯಿಗಳೂ, ದೋರೆಗಾಯಿಗಳೂ, ಮಾಗಿ ಚಿನ್ನದ ಬಣ್ಣವನ್ನು ತಳೆದಿದ್ದ ಹಣ್ಣುಗಳೂ ಗೊಂಚಲು ಗೊಂಚಲಾಗಿ ಬಿಟ್ಟಿದ್ದವು. ಹಣ್ಣಿನ ಆಕಾರ ಬಹುಮಟ್ಟಿಗೆ ಗುಂಡು ; ಮಧ್ಯದಲ್ಲಿ ಆರಂಗುಲ ದಪ್ಪವಿರಬಹುದು ; ಹೊರಭಾಗವೆಲ್ಲ ಸ್ವಲ್ಪ ಒರಟು. ಒಂದೊಂದು ಗೊಂಚಲಿನಲ್ಲೂ ಎರಡು

ಅಥವಾ ಮೂರು ಹಣ್ಣುಗಳಿದ್ದವು. ನಾವು ಬೆಟ್ಟದ ಮೇಲಕ್ಕೆ ಹೋಗುವ ಆತುರದಲ್ಲಿದ್ದೆವಾದ್ದರಿಂದ ಹಣ್ಣುಗಳನ್ನು ಕೊಯ್ಯಲಿಲ್ಲ.

ಬೆಟ್ಟದ ನೆತ್ತಿಯ ಮೇಲೆ ನಿಂತು ನೋಡಿದಾಗ ದ್ವೀಪದ ಸೌಂದರ್ಯ ನೂರುಮಡಿ ಹೆಚ್ಚಿದಂತಾಯಿತು. ದ್ವೀಪದ ಮಧ್ಯದಲ್ಲಿ ಎರಡು ದೊಡ್ಡ ಬೆಟ್ಟಗಳಿದ್ದವು. ನಾವು ಹತ್ತಿದ್ದೇ ಅವೆರಡರಲ್ಲಿ ಸ್ವಲ್ಪ ಚಿಕ್ಕದು. ಜೊತೆಗೆ ನಾಲ್ಕೈದು ಸಣ್ಣ ಗುಡ್ಡಗಳು. ಅವುಗಳ ಪಕ್ಕಗಳಲ್ಲಿಯೂ ನಡುವೆ ಇದ್ದ ಕಣಿವೆಗಳಲ್ಲಿಯೂ ನೆಲ ಕಾಣದಂತೆ ಗಿಡ ಮರಗಳು ಬೆಳೆದು ಪ್ರಕೃತಿದೇವಿ ಹಸುರು ಸೀರೆಯನ್ನುಟ್ಟಂತೆ ಕಾಣುತ್ತಿತ್ತು. ಅಲ್ಲಲ್ಲಿ ಸಣ್ಣ ಹೊಳೆಗಳು ಕಾಡಿನ ಮಧ್ಯೆ ನುಸುಳಿಕೊಂಡು ಹೋಗಿ ಒಂದೆರಡು ಕಡೆ ಪ್ರಪಾತಗಳಲ್ಲಿ ಧುಮುಕುತ್ತಿದ್ದವು. ನಮ್ಮೆದುರಿನ ಬೆಟ್ಟಕ್ಕೂ ನಮಗೂ ನಡುವೆ ಇದ್ದ ಕಣಿವೆಯನ್ನು ದಾಟಿ ಅದರ ಮೇಲೂ ಹತ್ತಿದೆವು. ಅಲ್ಲಿಂದ ದ್ವೀಪದ ಎಲ್ಲಾ ಭಾಗವನ್ನೂ ನೋಡಬಹುದಾಗಿತ್ತು. ಬೆಟ್ಟದ ತಪ್ಪಲಿಗೂ ಸಮುದ್ರಕ್ಕೂ ನಡುವೆ ಹಸುರಿನಿಂದ ತುಂಬಿದ ಮೈದಾನವಿತ್ತು. ಅದರಿಂದಾಚೆಗೆ ಹರಡಿದ್ದ ಮರಳಿನ ದಡದಿಂದ ಅರ್ಧ ಮೈಲಿ ಅಥವಾ ಒಂದು ಮೈಲಿ ದೂರದಲ್ಲಿ ಬಂಡೆಯ ಸಾಲು. ನಾವು ಮೊದಲೇ ಊಹಿಸಿದ್ದಂತೆ ಆ ಸಾಲು ದ್ವೀಪದ ಸುತ್ತಲೂ ಹಬ್ಬಿತ್ತು. ಸಮುದ್ರವು ಎಷ್ಟೇ ಶಾಂತವಾಗಿದ್ದರೂ ಈ ಬಂಡೆಗಳ ಮೇಲೆ ಯಾವಾಗಲೂ ಅಲೆಗಳ ಬಡಿತವಿದ್ದೇ ಇರುತ್ತದೆ. ಎರಡು ಮೂರು ಸ್ಥಳಗಳಲ್ಲಿ ಬಂಡೆಯ ಸಾಲು ಒಡೆದು ಒಳಗಡಲಿಗೆ ಬಾಗಿಲು ಮಾಡಿದಂತಿತ್ತು. ನಮ್ಮ ಹಡಗು ಒಡೆದು ಹೋದ ಸ್ಥಳದಲ್ಲಿ ಬಾಗಿಲಿನ ಎರಡು ಕಡೆಯಲ್ಲೂ ತೆಂಗಿನ ಮರದಿಂದ ಮುಚ್ಚಿದ್ದ ಸಣ್ಣ ನಡುಗಡ್ಡೆಗಳು ದಾರಿ ತೋರಿಸುವುದಕ್ಕೋ ಎಂಬಂತೆ ನಿಂತಿದ್ದವು. ನಮ್ಮ ದ್ವೀಪದ ಸುತ್ತ ಐದಾರು ಮೈಲಿಯ ದೂರದೊಳಗೆ ಕೆಲವು ಸಣ್ಣ ಸಣ್ಣ ದ್ವೀಪಗಳಿದ್ದವು. ತೆಂಗಿನ ಮರಗಳ ಹೊರತು ಆ ದ್ವೀಪದಲ್ಲಿ ನಮಗೆ ಮತ್ತೇನೂ ಕಾಣುವ ಹಾಗಿರಲಿಲ್ಲ. ಜನವಸತಿಯ ಗುರುತಂತೂ ಏನೇನೂ ಇರಲಿಲ್ಲ.

೪

# ಹುಲಿಮೀನಿನೊಡನೆ ಹೋರಾಟ

ಅಂದಿನಿಂದ ಕೆಲವು ದಿನ ನಾವು ಗುಡಿಸಲಿನಿಂದ ಹೆಚ್ಚು ದೂರ ತಿರುಗಾಡಲಿಲ್ಲ. ಇದ್ದ ಸ್ಥಳವನ್ನು ಸರಿಪಡಿಸಿಕೊಂಡು ಗುಡಿಸಲನ್ನು ಭದ್ರಪಡಿಸಿದ ಮೇಲೆ ನಮ್ಮ ಮುಂದಿನ ಗತಿಯೇನು ಎಂಬ ಯೋಚನೆ ಬಲವಾಯಿತು. ದ್ವೀಪವೇನೋ ಬಹಳ ರಮ್ಯವಾದದ್ದು. ಆಹಾರಕ್ಕೆ ಕೊರತೆಯಿಲ್ಲ, ನಮಗೆ ಆವಶ್ಯಕವಾದ ಪದಾರ್ಥಗಳೆಲ್ಲಾ ಸಿಕ್ಕುತ್ತವೆ, ಹವ ಹಿತಕರವಾಗಿದೆ, ಎಂದು ಅದರ ಗುಣಗಳನ್ನು ಎಷ್ಟೇ ಬಣ್ಣಿಸಿದರೂ ಪುನಃ ನಮ್ಮ ಮಾತೃ ಭೂಮಿಯನ್ನೂ ಬಂಧು ಮಿತ್ರರನ್ನೂ ನೋಡದೆ ಜೀವಮಾನವನ್ನೆಲ್ಲಾ ಅಲ್ಲಿಯೇ ಕಳೆಯುವುದೆಂದರೆ ಕಷ್ಟ. ಅಷ್ಟೇ ಅಲ್ಲದೆ ದ್ವೀಪದಲ್ಲಿ ಜನಗಳಿರುವರೇ, ಇದ್ದರೆ ಅವರ ಸ್ವಭಾವವೆಂಥಾದ್ದು, ಎಂಬ ಯೋಚನೆ ಬೇರೆ. ತೀರದ ಹತ್ತಿರವೇ ಇದ್ದರೆ ಯಾವುದಾದರೂ ಹಡಗು ಕಣ್ಣಿಗೆ ಬೀಳಬಹುದು, ಅದರ ಸಹಾಯದಿಂದ ಮತ್ತೆ ನಾವು ನಾಗರಿಕತೆಯ ಮುಖ ಕಾಣಬಹುದು, ಎಂಬ ಆಸೆಯಿಂದ ಕೆಲವು ದಿನ ಕರೆಯ ಹತ್ತಿರದಲ್ಲೇ ಓಡಾಡಿದೆವು ಆದರೆ ದಿನ ಕಳೆದ ಹಾಗೆಲ್ಲಾ ನಮ್ಮ ಆಸೆ ದೂರವಾಗುತ್ತ ಬಂತು. ಇನ್ನು ದ್ವೀಪದಲ್ಲೇ ಇದ್ದು ಸಾಧ್ಯವಾದಷ್ಟು ಅನುಕೂಲಗಳನ್ನು ಕಲ್ಪಿಸಿಕೊಳ್ಳುವುದೊಂದೇ ದಾರಿ.

ಅದುವರೆಗೂ ತೆಂಗಿನಕಾಯಿ, ಹಣ್ಣು ಹಂಪಲುಗಳನ್ನೇ ತಿಂದು ಬೇಸರವಾಗಿ, ಬೇರೆ ಆಹಾರವನ್ನು ಹುಡುಕುವ ಯೋಚನೆ ಮಾಡಿದೆವು. ಪೀಟರ್ ನಮ್ಮಲ್ಲಿದ್ದ ಹುರಿಯನ್ನೇ ಉಪಯೋಗಿಸಿ ಗಾಳ ಮಾಡಿಕೊಂಡು ಮೀನು ಹಿಡಿಯುವ ಪ್ರಯತ್ನ ಮಾಡಿದ. ಆದರೆ ದಾರದ ಉದ್ದ ಸಾಲದು; ಅಲ್ಲದೆ ನಮಗೆ ದೋಣಿಯಿಲ್ಲದ್ದರಿಂದ ದಡದ ಹತ್ತಿರ ಸಿಕ್ಕಿದ ಸಣ್ಣ ಸಣ್ಣ ಮೀನುಗಳನ್ನೇ ಹಿಡಿಯಬೇಕು. ಒಂದು ದಿನವಂತೂ ಪೀಟರ್ ಘಂಟೆಗಟ್ಟಲೆ ನೀರಿನ ಬಳಿ ನಿಂತು ಒಂದು ಮೀನೂ ಸಿಕ್ಕದೆ ರೇಗಿಕೊಂಡು ಬಂದು " ಜಾಕಿ, ನನ್ನನ್ನು ಬೆನ್ನಮೇಲೆ ಕೂರಿಸಿಕೊಂಡು ನೀನು ಈಜುವುದಾದರೆ ಏನಾದರೂ ದೊಡ್ಡ ಮೀನು ಹಿಡಿಯಬಹುದು. ನನಗೆ ತೆಂಗಿನಕಾಯಿ ತಿಂದು ಸಾಕಾಗಿದೆ" ಎಂದನು.

" ನಿನಗೆ ಅಷ್ಟೊಂದು ಬೇಸರವಾಗಿದೆಯೆಂದು ನನಗೇನು ಗೊತ್ತು, ಪೀಟರ್ ? ಮೊದಲೇ ಹೇಳಿದ್ದರೆ ಏನಾದರೂ ಉಪಾಯ ಹುಡುಕಬಹುದಾಗಿತ್ತು . . . ಸಾಧ್ಯವಾದರೆ ಒಂದು ದೋಣಿ ಕಟ್ಟೋಣ."

" ಅದು ಬಹಳ ದಿನ ಹಿಡಿಯುತ್ತೆ. ಹಸಿವಿನಿಂದ ನನ್ನ ಹೆಣ ಬಿದ್ದಮೇಲೆ ನೀನು ದೋಣಿಯಲ್ಲಿ ಕೂತು ಮೀನು ಹಿಡಿಯುವೆಯಂತೆ. ಇವೊತ್ತೇ ಏನಾದರೂ ಮಾಡಬೇಕು."

" ಹಾಗಾದರೆ ಒಂದು ಮರ ಕಡಿದು ದಿಮ್ಮಿಯನ್ನು ನೀರಿನಲ್ಲಿ ತೇಲಿಬಿಡೋಣ. ಮೀನು ಹಿಡಿಯಬೇಕಾದಾಗ ಈಜಿಕೊಂಡು ಹೋಗಿ ದಿಮ್ಮಿಯ ಮೇಲೆ ಕುಳಿತುಕೊಳ್ಳಬಹುದು. ಎರಡು ಹುಟ್ಟುಗಳನ್ನು ಮಾಡಿಕೊಂಡು ಅದನ್ನು ಬೇಕಾದ ಕಡೆ ತಿರುಗಿಸಲೂ ಬಹುದು."

ಪೀಟರ್ ಅದಕ್ಕೆ ಒಪ್ಪಿದನು. ಮೂವರೂ ಸರದಿಯ ಮೇಲೆ ಕೆಲಸಮಾಡಿ ತೀರದ ಹತ್ತಿರದಲ್ಲೇ ಮರವೊಂದನ್ನು ಕಡಿದು, ಅದರ ಕಾಂಡವನ್ನು ಕತ್ತರಿಸಿ ನೀರಿಗೆ ಉರುಳಿಸಿದೆವು. ಹುಟ್ಟುಗಳನ್ನು ತಯಾರುಮಾಡುವ ಹೊತ್ತಿಗೆ ದಿಮ್ಮಿ ಆಳವಾದ ನೀರಿಗೆ ತೇಲಿ ಹೋಗಿತ್ತು. ಮೀನು ಹಿಡಿಯುವ ವಿಷಯದಲ್ಲಿ ಹೆಚ್ಚು ಆತುರವಿದ್ದವನು ಪೀಟರ್. ಆದ್ದರಿಂದ ಅವನೇ ಮೊದಲು ನೀರಿಗಿಳಿದು ದಿಮ್ಮಿಯವರೆಗೂ ಈಜಿಕೊಂಡು ಹೋಗಿ ನಿಧಾನವಾಗಿ ಅದರ ಮೇಲೆ ಹತ್ತಿ ಕುದುರೆಯ ಮೇಲೆ ಕೂರುವಂತೆ ಕುಳಿತು ನಮ್ಮ ಕಡೆ ನೋಡೋಣವೆಂದು ತಿರುಗಿದನು. ಆ ಕ್ಷಣವೇ ದಿಮ್ಮಿ ಉರುಳಿ ಪೀಟರನ್ನು ನೀರಿಗೆ ಬೀಳಿಸಿತು. ಇನ್ನೊಂದು ಸಾರಿ ಕುಳಿತುಕೊಳ್ಳುವ ಪ್ರಯತ್ನ ಮಾಡಿದಾಗಲೂ ಇದೇ ಹಣೆಯಬರಹವಾಯಿತು. ದಡದಲ್ಲಿ ನಿಂತು ನೋಡುತ್ತಿದ್ದ ನಮಗೆ ನಗು ಬಂತು. ಸರಿಯಾಗಿ ಕುಳಿತುಕೊಳ್ಳುವುದನ್ನು ಹೇಳಿಕೊಡೋಣವೆಂದು ನೀರಿಗಿಳಿದೆವು. ನಮ್ಮನ್ನು ಸೇರಿಸಬಾರದೆಂದು ಆ ದಿಮ್ಮಿಯೇನಾದರೂ ಹಟ ತೊಟ್ಟಿದ್ದಿತೋ ಏನೋ. ನಮಗೂ ಪೀಟರಿಗಾದ ಅನುಭವವೇ ಆಯಿತು. ಎಂಟು ಹತ್ತು ಸಲ ನೀರಿಗೆ ಉರುಳಿದ ಮೇಲೆ ಸ್ವಲ್ಪ ಮಟ್ಟಿಗೆ ಅದರ ಮೇಲೆ ಕೂರುವ ರೀತಿ ಅಭ್ಯಾಸವಾಯಿತು. ಅಂತೂ ಆ ದಿನವೆಲ್ಲಾ ಇದರಲ್ಲೇ ಕಳೆಯಿತೇ ಹೊರತು ಮೀನು ಹಿಡಿ

ಯುವ ಕೆಲಸವೇನೂ ಸಾಗಲಿಲ್ಲ. ದಿಮ್ಮಿಯ ಎರಡು ಕಡೆಗಳಲ್ಲೂ ಸಮನಾಗಿ ತೂಕ ಬಿಟ್ಟು ಕೂರುವುದನ್ನು ಕಲಿತ ಮೇಲೂ ನಮ್ಮ ಕೆಲಸ ಸುಲಭವಾಗಲಿಲ್ಲ. ಒಳಗಡಲಿನಲ್ಲಿದ್ದ ಮೀನುಗಳು ನಮ್ಮ ಒರಟು ಗಾಳಕ್ಕೆ ಸಿಕ್ಕಿ ಬೀಳುವಷ್ಟು ಪೆದ್ದಾಗಿರಲಿಲ್ಲ. ಬಹು ಮಟ್ಟಿಗೆ ಅವು ಹತ್ತಿರ ಬಂದು ನಾವು ದಾರದ ತುದಿಗೆ ಕಟ್ಟಿದ್ದ ತಿಂಡಿಯನ್ನು ಸ್ವಲ್ಪ ಕುಟುಕಿ ಹೊರಟು ಹೋಗುವುವು. ಅಥವಾ ಪೂರ್ತಿ ತಿಂದರೂ ನಾವು ದಿಮ್ಮಿ ಉರುಳದಂತೆ ನೋಡಿಕೊಳ್ಳುವ ಸಂಭ್ರಮದಲ್ಲಿದ್ದಾಗ ಹೇಗೋ ತಪ್ಪಿಸಿಕೊಂಡು ಹೋಗುವುವು. ಒಂದು ಸಾರಿ ನಾವು ಮೀನು ಹಿಡಿಯುವುದಕ್ಕೆ ಬದಲು ಮೀನೇ ನಮ್ಮ ದಾರವನ್ನು ಹಿಡಿದುಕೊಂಡು ಹೋಯಿತು. ಪೀಟರ್ ಈಜು ಬಿದ್ದು ದಾರವನ್ನು ಮತ್ತೆ ತರಬೇಕಾಯಿತು. ನಮ್ಮ ಗಾಳಕ್ಕೆ ಸರಿಯಾದ ಕೊಂಡಿ ಮಾತ್ರ ಇದ್ದಿದ್ದರೆ ಅಷ್ಟೊಂದು ತೊಂದರೆಯಾಗುತ್ತಿರಲಿಲ್ಲ. ಅಂತೂ ಆಗಿಂದಾಗ ಒಂದೆರಡು ಮೀನನ್ನಾದರೂ ಸಂಪಾದನೆ ಮಾಡುತ್ತಿದ್ದೆವು.

ಒಂದು ದಿನ ನಾವು ಈ ಕೆಲಸದಲ್ಲಿ ಮಗ್ನರಾಗಿದ್ದಾಗ ಕೆಲವು ಗಜ ದೂರದಲ್ಲೇ ಯಾವುದೋ ದೊಡ್ಡ ಪ್ರಾಣಿ ನೀರಿನಲ್ಲಿ ಈಜಿ ಬರುವಂತೆ ಸದ್ದಾಯಿತು. ಪೀಟರ್ ತಿರುಗಿ ನೋಡಿದ.

"ಆ ಕಡೆಗೆ ಹುಟ್ಟು ಹಾಕು, ಜಾಕಿ. ಅಲ್ಲಿ ಭಾರಿ ಮೀನಿರುವ ಹಾಗೆ ಕಾಣುತ್ತೆ. ಸಾಧ್ಯವಾದರೆ ಹಿಡಿಯೋಣ."

ಅತ್ತ ಕಡೆ ನೋಡಿದೊಡನೆಯೇ ಜಾಕಿಯ ಮುಖ ಬಿಳಿಚಿಕೊಂಡಿತು. ಬಹಳ ಗಾಬರಿಗೊಂಡ ದನಿಯಿಂದ "ಪೀಟರ್, ನಿನ್ನ ದಾರವನ್ನು ಮೇಲಕ್ಕೆ ತೆಗೆದುಕೊಂಡು ಬೇಗ ಬೇಗ ಹುಟ್ಟು ಹಾಕು. ಅಲ್ಲಿ ಬರುತ್ತಿರುವುದು ಷಾರ್ಕ್ *" ಎಂದನು.

ಇದನ್ನು ಕೇಳಿದೊಡನೆಯೇ ಭಯದಿಂದ ನಮ್ಮ ಹೃದಯದ ತುಡಿತವೇ ನಿಂತು ಹೋದಂತಾಯಿತು. ಷಾರ್ಕಿನ ಬಾಯಿಂದ ತಪ್ಪಿಸಿಕೊಳ್ಳಲು ಯಾವ ದಾರಿಯೂ ಕಾಣಲಿಲ್ಲ. ನಾವು ದಿಮ್ಮಿಯ ಮೇಲೆ

---

* ಬಹಳ ಕ್ರೂರಸ್ವಭಾವದ ಭಾರಿ ಮೀನು— ಹುಲಿಮೀನು.

ಕೂರಬೇಕಾದರೆ ಕಾಲುಗಳನ್ನು ನೀರಿನಲ್ಲಿ ಇಳಿಯಬಿಟ್ಟೇ ತೀರಬೇಕು ಷಾರ್ಕಿನ ಬಾಯಿಗೆ ಸಿಕ್ಕದಿರಲೆಂದು ಕಾಲನ್ನು ಮೇಲಕ್ಕೆತ್ತಿದರೆ ಆ ಕ್ಷಣವೇ ದಿಮ್ಮಿ ಉರುಳಿ ನಮ್ಮನ್ನು ನೀರಿಗೆ ಒಗೆಯುವುದು. ಷಾರ್ಕಿಗೆ ನಮ್ಮನ್ನು ಹಿಡಿಯುವ ಕೆಲಸ ಮತ್ತಷ್ಟು ಸುಲಭವೇ ಆಗುವುದು. ಇಷ್ಟಾದರೂ ಧೈರ್ಯಗೆಡದೆ ನಮ್ಮ ಶಕ್ತಿಯನ್ನೆಲ್ಲಾ ಬಿಟ್ಟು ಹುಟ್ಟು ಹಾಕಿದೆವು. ದಿಮ್ಮಿ ಬಹಳ ಭಾರವಾಗಿದ್ದುದರಿಂದ ನಮ್ಮ ವೇಗವೇನೂ ಹೇಳಿಕೊಳ್ಳುವ ಹಾಗಿರಲಿಲ್ಲ. ಷಾರ್ಕು ಹತ್ತಿರಕ್ಕೆ ಬಂದು ನಮ್ಮ ಸುತ್ತ ಪ್ರದಕ್ಷಿಣೆಯಾಗಿ ತಿರುಗುತ್ತಿತ್ತು. ಅದು ದಿಮ್ಮಿಯನ್ನು ನೋಡಿ ' ಇದೇನಿರಬಹುದು ' ಎಂದು ಸಂದೇಹಪಟ್ಟು ತಿರುಗುತ್ತಿದ್ದಿರಬಹುದು. ಆದರೆ ಆ ಸಂದೇಹ ಬಹಳ ಹೊತ್ತು ನಿಲ್ಲಲಾರದು. ಕ್ಷಣ ಕ್ಷಣಕ್ಕೂ ರೋಷದಿಂದ ಅದರ ವೇಗ ಹೆಚ್ಚುತ್ತಿತ್ತು. ನಮ್ಮ ಮೇಲೆ ನುಗ್ಗುವ ಪ್ರಯತ್ನಕ್ಕೆ ಇದೆಲ್ಲಾ ಪೀಠಿಕೆ. ನಾನು, ಪೀಟರ್, ಇಬ್ಬರೂ ಒಂದೇ ಸಮನಾಗಿ ಜೀವದ ಆಸೆಯಿಂದ ಹುರಿದುಂಬಿ ಹುಟ್ಟು ಹಾಕಿದೆವು. ಜಾಕಿ ಷಾರ್ಕಿನಮೇಲೆ ಕಣ್ಣಿಟ್ಟಿದ್ದನು.

" ಜೋಕೆ, ಜೋಕೆ, ಹತ್ತಿರ ಬಂತು " ಎಂದು ಜಾಕಿ ಕೂಗಿದ. ನಾವು ತಿರುಗಿ ನೋಡಿದಾಗ ಷಾರ್ಕು ನೀರಿನಲ್ಲಿ ಮುಳುಗಿ ಅಂಗತಂಗನಾಗಿ ಮತ್ತೆ ಮೇಲಕ್ಕೇಳುತ್ತಿತ್ತು. ಕೂಡಲೇ ನಾವು ಹುಟ್ಟುಗಳಿಂದ ನೀರನ್ನು ಬಡಿದು ಗಲಭೆ ಮಾಡಿದ್ದರಿಂದ ಅದು ಹೆದರಿ ಸ್ವಲ್ಪ ದೂರ ಹಿಂದಕ್ಕೆ ಹೋಯಿತು. ಆದರೆ ಒಂದೆರಡು ನಿಮಿಷಗಳಲ್ಲೇ ಮತ್ತೆ ಹತ್ತಿರ ಬಂದು ನಮ್ಮ ಸುತ್ತ ತಿರುಗತೊಡಗಿತು.

" ಪೀಟರ್, ನಾವು ಹಿಡಿದ ಮೀನನ್ನು ಅದರ ಕಡೆಗೆ ಎಸೆದು ಬಿಡು. ಇನ್ನು ಎರಡು ಮೂರು ನಿಮಿಷ ಅದು ಹತ್ತಿರ ಬರದೆ ಹೋದರೆ ನಾವು ದಡ ಸೇರಬಹುದು." ಜಾಕಿಯ ಧ್ವನಿ ಬಾವಿಯೊಳಗಿನಿಂದ ಬಂದಂತೆ ಕೇಳಿತು.

ಒಂದು ಕ್ಷಣ ಮಾತ್ರ ಹುಟ್ಟು ನಿಲ್ಲಿಸಿ, ಮೀನನ್ನು ಎಸೆದು ಮತ್ತೆ ದಡದ ಕಡೆಗೆ ಸಾಗಿದೆವು. ಮೀನು ನೀರಿಗೆ ಬಿದ್ದೊಡನೆಯೇ ಷಾರ್ಕು ಮುಳುಗಿ ಬೆನ್ನಮೇಲೆ ತಿರುಗಿ ಭಯಂಕರವಾಗಿ ಬಾಯಿ ತೆರೆಯಿತು.

ಸ್ಪಷ್ಟವಾಗಿ ಕಾಣುತ್ತಿದ್ದ ಅದರ ಇಜ್ಜೋಡಿ ಹಲ್ಲುಗಳನ್ನು ನೋಡಿದರೆ ಮೈ ನಡುಕ ಬರುವುದು. ಮೀನನ್ನು ನುಂಗಿ ಷಾರ್ಕು ಮತ್ತೆ ಕಣ್ಮರೆಯಾಯಿತು. ಅಷ್ಟಕ್ಕೇ ತೃಪ್ತಿಯಾಗಿ ಅದು ಹೊರಟುಹೋಯಿತೇನೋ ಎಂದುಕೊಳ್ಳುವಷ್ಟರಲ್ಲಿ ಅದು ಪುನಃ ಮೇಲಕ್ಕೆ ಬಂದು ಹಿಂದಿನಂತೆ ಪ್ರದಕ್ಷಿಣೆಗೆ ತೊಡಗಿತು. ಮೀನನ್ನು ಕಂಡಮೇಲೆ ಅದರ ಹಸಿವೂ ರೋಷವೂ ಇಮ್ಮಡಿಯಾಗಿರಬೇಕು. ಅದರ ಚಲನೆಯ ವೇಗವನ್ನು ನೋಡಿ ಬಲುಬೇಗನೆ ನಮ್ಮ ಮೇಲೆ ನುಗ್ಗುವುದೆಂದು ಖಂಡಿತ ಮಾಡಿಕೊಂಡೆವು. ಜಾಕಿ ನಮ್ಮನ್ನು ಕೂಗಿ ಕಠಿನ ಸ್ವರದಲ್ಲಿ ಹೇಳಿದ :

"ಅದು ನಮ್ಮ ಹಿಂದೆ ಬರುತ್ತಾ ಇದೆ. ಹುಟ್ಟು ಹಾಕುವುದನ್ನು ನಿಲ್ಲಿಸಿಬಿಡಿ. ಚಾಚೂ ತಪ್ಪದಂತೆ ನಾನು ಹೇಳಿದಂತೆ ನಡೆಯಬೇಕು, ತಿಳಿಯಿತೆ? ಸ್ವಲ್ಪ ತಪ್ಪಿದರೂ ನಾವು ಬದುಕುವ ಸಂಭವವಿಲ್ಲ, ಹುಷಾರು. ನೀವಿಬ್ಬರೂ ಭದ್ರವಾಗಿ ಕುಳಿತು ದಿಮ್ಮಿ ಉರುಳದಂತೆ ಮಾತ್ರ ನೋಡಿಕೊಳ್ಳಿ. ಷಾರ್ಕಿನ ಕಡೆಗೆ ತಿರುಗಿ ನೋಡಬೇಡಿ. ಸ್ವಲ್ಪವೂ ಅಲುಗಾಡದೆ ಇರಬೇಕು. ಖಂಡಿತ ಹಿಂದಕ್ಕೆ ತಿರುಗಬೇಡಿ. ದಿಮ್ಮಿ ಉರುಳದಂತೆ ನೋಡಿಕೊಳ್ಳುವುದೊಂದೇ ನಿಮ್ಮ ಕೆಲಸ. ಉಳಿದದ್ದೆಲ್ಲಾ ನನಗೆ ಬಿಟ್ಟು ಬಿಡಿ."

ನಾವು ಬದುಕಿದರೆ ಜಾಕಿಯ ಧೈರ್ಯದಿಂದಲೂ ಬುದ್ಧಿವಂತಿಕೆಯಿಂದಲೂ ಬದುಕಬೇಕೆಂದು ನಾವು ಚೆನ್ನಾಗಿ ಬಲ್ಲೆವು. ಜೀವಭಯದಿಂದ ಹಲ್ಲು ಕಚ್ಚಿಕೊಂಡು ಅಲ್ಲಾಡದೆ ಕುಳಿತೆವು. ಕೆಲವು ಕ್ಷಣ ಉಸಿರು ಸಹ ಬಿಡಲಿಲ್ಲ. ನಮ್ಮ ಪಾಲಿಗೆ ಒಂದೊಂದು ಕ್ಷಣವೂ ಯುಗವಾಗಿ ಪರಿಣಮಿಸಿತು. ಹಿಂತಿರುಗಿ ನೋಡಕೂಡದೆಂದು ಜಾಕಿ ಕಟ್ಟಪ್ಪಣೆ ಮಾಡಿದ್ದರೂ ನಾನು ಸ್ವಲ್ಪ ತಿರುಗಿ ಓರೆಗಣ್ಣಿನಿಂದ ನೋಡಿದೆ. ಜಾಕಿ ಕೈಯಲ್ಲಿ ಹುಟ್ಟು ಹಿಡಿದು ಹಲ್ಲು ಕಚ್ಚಿಕೊಂಡು ನೀರಿನ ಕಡೆಗೇ ದೃಷ್ಟಿಯನ್ನು ನೆಟ್ಟು ಪ್ರತಿಮೆಯಂತೆ ನಿಶ್ಚಲವಾಗಿ ಕುಳಿತಿದ್ದನು. ಷಾರ್ಕು ಅವನ ಕಾಲಿನ ಬಳಿಯಲ್ಲೇ ಬಂದು ಇನ್ನೇನು ಮುಂದೆ ನುಗ್ಗುವುದರಲ್ಲಿತ್ತು. ನನಗೆ ಭಯದಿಂದ ಮೈ ಬೆವತು ಚೀರುವಂತಾಯಿತು. ಆದರೂ ಕಷ್ಟಪಟ್ಟು ತಡೆದುಕೊಂಡೆ. ಕಣ್ಣು ಮುಚ್ಚಿ ತೆರೆ

ಯುವಷ್ಟರಲ್ಲಿ ಜಾಕಿ ಕಾಲನ್ನು ನೀರಿನಿಂದ ತೆಗೆದು ದಿಮ್ಮಿಯ ಮೇಲಿಟ್ಟು ಕೊಂಡ. ಆ ಕ್ಷಣವೇ ಷಾರ್ಕು ಬೆನ್ನ ಮೇಲೆ ತಿರುಗಿಕೊಂಡು ಬಾಯಿ ತೆರೆದು ಮುಂದೆ ನುಗ್ಗಿತು. ಜಾಕಿ ಕೈಯಲ್ಲಿದ್ದ ಹುಟ್ಟನ್ನೆತ್ತಿ ತನ್ನ ಬಲವನ್ನೆಲ್ಲಾ ಬಿಟ್ಟು ಈಟಿಯಿಂದ ಇರಿಯುವಂತೆ ಅದನ್ನು ಷಾರ್ಕಿನ ಬಾಯಿಯೊಳಕ್ಕೆ ತುರುಕಿದನು. ಏಟಿನ ಬಲಕ್ಕೆ ಅವನು ದಿಮ್ಮಿಯ ಮೇಲೆ ಎದ್ದು ನಿಲ್ಲ ಬೇಕಾಯಿತು. ಅವನು ನಿಂತೊಡನೆಯೇ ದಿಮ್ಮಿ ಉರುಳಿಹೋಗಿ ಎಲ್ಲರೂ ನೀರಿಗೆ ಬಿದ್ದೆವು.

"ದಡದ ಕಡೆಗೆ ಹೊರಡಿ! ಉಸಿರಾಡುವುದಕ್ಕೂ ಸಮಯವಿಲ್ಲ. ಪೀಟರ್, ಆಯಾಸವಾದರೆ ನನ್ನ ಕಾಲರ್ ಹಿಡಿದುಕೊ. ನಿಮ್ಮ ಶಕ್ತಿಯನ್ನೆಲ್ಲಾ ಬಿಟ್ಟು ಈಜಬೇಕು." ಎಂದು ಕೂಗುತ್ತ ಜಾಕಿ ನೀರನ್ನು ಸೀಳಿಕೊಂಡು ದಡದ ಕಡೆಗೆ ಹೊರಟ. ಅವನು ಕೊಟ್ಟ ಏಟಿನಿಂದ ಷಾರ್ಕು ಚೇತರಿಸಿಕೊಳ್ಳುವುದರೊಳಗೆ ನಾವು ದಡದ ಬಳಿ ಇದ್ದ ತೆಳ್ಳಗೆ ಬಂದಿದ್ದೆವು. ಅಲ್ಲಿ ಷಾರ್ಕು ಈಜುವುದಕ್ಕೆ ಸಾಕಾದಷ್ಟು ಆಳವಿರಲಿಲ್ಲ. ಸುರಕ್ಷಿತವಾಗಿ ದಡವನ್ನು ಹತ್ತಿದೆವು. ನಾವು ಬೇಸತ್ತು ಹೋಗಿದ್ದುದು ಹಾಗಿರಲಿ, ಭಯದಿಂದ ಕೈಕಾಲು ಇನ್ನೂ ನಡುಗುತ್ತಲೇ ಇತ್ತು. ಸಾವಿನ ದವಡೆಗೆ ಸಿಕ್ಕಿ ತಪ್ಪಿಸಿಕೊಂಡ ಹಾಗಾಯಿತು. ಅಂದು ನಮಗೆ ಪುನರ್ಜನ್ಮ.

೫

## ಆಯುಧಗಳ ತಯಾರಿಕೆ

ನಾವು ದ್ವೀಪಕ್ಕೆ ಬಂದ ಮೊದಲ ದಿನಗಳಲ್ಲಿ ಅಲ್ಲಿಯ ಸುಂದರವಾದ ದೃಶ್ಯಗಳು ನಮ್ಮನ್ನು ಮರುಳುಮಾಡಿದ್ದವು. ಪುನಃ ನಾವು ನಮ್ಮ ಊರಿಗೆ ಹೋಗುವುದು ಸಾಧ್ಯವೆ ಎಂಬ ಯೋಚನೆ ಸ್ವಲ್ಪ ಬಾಧಿಸುತ್ತಿತ್ತು; ಜೊತೆಗೆ ಕಾಡುಜನರಿಂದ ತೊಂದರೆಯಾದೀತು ಎಂಬ ಭಯ ಬೇರೆ. ಆದರೂ ಬಹುಮಟ್ಟಿಗೆ ನಿಶ್ಚಿಂತೆಯಾಗಿ ಸಂತೋಷದಿಂದ

ಕಾಲ ಕಳೆಯುತ್ತಿದ್ದೆವು. ಅಪಾಯಕರವಾದ ಅನುಭವವೇನೂ ಆಗಿರಲಿಲ್ಲ. ಆದರೆ ಷಾರ್ಕಿನೊಡನೆ ಹೋರಾಡಿ ದೇವರ ದಯದಿಂದ ಬದುಕಿ ಬಂದ ಮೇಲೆ, ನಾವು ಇನ್ನು ಸ್ವಲ್ಪ ಜಾಗರೂಕರಾಗಿದ್ದರೆ ಒಳ್ಳೆಯದು ಎನ್ನಿಸಿತು. ಇಲ್ಲಿ ಷಾರ್ಕುಗಳಿವೆಯೆಂದು ತಿಳಿಯದೆ ನಾವು ಪ್ರತಿದಿನವೂ ಈಜುವುದಕ್ಕೆ ಹೋಗುತ್ತಿದ್ದೆವು. ಈಗ ಅದನ್ನು ನೆನೆದರೂ ಮೈ ನಡುಗುವುದು. ಇನ್ನು ಮೇಲೆ ಮೀನು ಹಿಡಿಯುವುದಕ್ಕಾಗಲಿ ಈಜುವುದಕ್ಕಾಗಲಿ ದಡವನ್ನು ಬಿಟ್ಟು ಹತ್ತು ಹೆಜ್ಜೆಯೂ ಮುಂದೆ ಹೋಗುವುದಕ್ಕಾಗದು ಎಂದು ನಿಶ್ಚಯಿಸಿಕೊಂಡೆವು. ಆದರೂ ಅಪಾಯವಿಲ್ಲದೆ ಈಜುವುದಕ್ಕೆ ಸರಿಯಾದ ಸ್ಥಳವನ್ನು ನಾವು ಹುಡುಕುತ್ತಲೇ ಇದ್ದೆವು. ಕೊನೆಗೆ ಅದು ಸಿಕ್ಕಿತು. ನಮ್ಮ ಗುಡಿಸಲಿನಿಂದ ಸುಮಾರು ಅರ್ಧಮೈಲಿ ದೂರದಲ್ಲೇ ಭೂಮಿಯೊಳಕ್ಕೆ ಸಮುದ್ರ ನುಗ್ಗಿ ಆಳವಾದ ಸಣ್ಣ ಕೊಲ್ಲಿಯಾಗಿತ್ತು. ಅದಕ್ಕೆ ಎಲ್ಲಾ ಕಡೆಯಲ್ಲೂ ದೊಡ್ಡ ಬಂಡೆಗಳ ರಕ್ಷಣೆಯಿದ್ದು ಒಂದುಕಡೆ ಮಾತ್ರ ಸಣ್ಣ ದಿಡ್ಡಿಬಾಗಿಲಿನಂತೆ ಸ್ವಲ್ಪ ಸ್ಥಳಬಿಟ್ಟಿತ್ತು. ಅದು ಬಹಳ ಸಣ್ಣದಾಗಿದ್ದುದಲ್ಲದೆ ಆ ಭಾಗದಲ್ಲಿ ಆಳವಿಲ್ಲದೆ ಇದ್ದುದರಿಂದ ಷಾರ್ಕುಗಳು ಅಲ್ಲಿಂದ ಒಳಗೆ ಬರುವಂತಿರಲಿಲ್ಲ. ಈ ಕೊಲ್ಲಿಯಲ್ಲಿದ್ದ ಹವಳಗಳು ಒಳಗಡಲಿನಲ್ಲಿದ್ದವುಗಳಿಗಿಂತಲೂ ಸುಂದರವಾಗಿದ್ದುವು. ನೀರೂ ಬಹಳ ಶಾಂತವಾಗಿದ್ದುದರಿಂದ ಸಮುದ್ರದ ತಳದಲ್ಲಿ ಎಷ್ಟು ಸಣ್ಣ ಪದಾರ್ಥವಿದ್ದರೂ ಸ್ಪಷ್ಟವಾಗಿ ಕಾಣುತ್ತಿತ್ತು. ಅಲ್ಲದೆ ದಡದ ಹತ್ತಿರ ಎತ್ತರವಾದ ಬಂಡೆಯಿತ್ತು. ಅದರಮೇಲಿನಿಂದ ನೀರಿಗೆ ನೆಗೆಯುವ ಆನಂದವನ್ನು ಸಹ ನಾವು ಅನುಭವಿಸಬಹುದು. ಈ ಸ್ಥಳವನ್ನು ಕಂಡುಹಿಡಿದ ಮೇಲೆ ನಾವು ಯಾವ ಭಯವೂ ಇಲ್ಲದೆ ದಿನಾ ನಾಲ್ಕೈದು ಘಂಟೆಗಳ ಕಾಲ ನೀರಿನಲ್ಲಿ ಆಟವಾಡುತ್ತಿದ್ದೆವು. ಈಜುವುದನ್ನೂ ಮುಳುಗುವುದನ್ನೂ ಚೆನ್ನಾಗಿ ಕಲಿತೆ. ಭೂತಕನ್ನಡಿಯ ಸಹಾಯದಿಂದ ನೀರಿನಲ್ಲಿರುವ ಪ್ರಾಣಿಗಳ ಸ್ವರೂಪವನ್ನು ಚೆನ್ನಾಗಿ ಪರಿಚಯ ಮಾಡಿಕೊಳ್ಳುವುದೂ ಸಾಧ್ಯವಾಯಿತು.

ಈಗ ನಮಗೆ ಯಾವುದೊಂದು ಚಿಂತೆಯೂ ಇರಲಿಲ್ಲ. ದ್ವೀಪದ

ಸುತ್ತಲೂ ತಿರುಗಿ ಇನ್ನು ಯಾವುದಾದರೂ ನಮ್ಮ ಜೀವನಕ್ಕೆ ಉಪಯೋಗವಾಗುವ ಪದಾರ್ಥಗಳು ಸಿಕ್ಕುತ್ತವೆಯೋ ನೋಡೋಣ ಎನ್ನಿಸಿತು. ಅಲ್ಲದೆ ನಾವು ಈಗ ಇದ್ದ ಸ್ಥಳಕ್ಕಿಂತ ವಾಸಕ್ಕೆ ಇನ್ನೂ ಅನುಕೂಲವಾದ ಸ್ಥಳ ಸಿಕ್ಕಬಹುದೆಂಬ ಆಸೆಯೂ ಇತ್ತು. ನಾವಿದ್ದ ಸ್ಥಳವೇನೋ ಚೆನ್ನಾಗಿತ್ತು. ಆದರೆ ಅದಕ್ಕಿಂತಲೂ ಉತ್ತಮವಾದ ಸ್ಥಳವಿದ್ದರೆ ಅಲ್ಲಿಗೇ ಏತಕ್ಕೆ ಹೋಗಬಾರದು? ಹೀಗೆಂದುಕೊಂಡು ಪ್ರಯಾಣಕ್ಕೆ ಬೇಕಾದ ಏರ್ಪಾಟುಮಾಡಲು ಪ್ರಾರಂಭಿಸಿದೆವು. ದ್ವೀಪವನ್ನು ಸುತ್ತು ಹಾಕುವುದಲ್ಲದೆ ಬೆಟ್ಟದ ಕಣಿವೆಗಳಲ್ಲೆಲ್ಲಾ ತಿರುಗಿಬರಬೇಕೆಂದು ಯೋಚನೆಮಾಡಿದ್ದೆವು. ನೀರಿನಲ್ಲಿ ಷಾರ್ಕುಗಳಿದ್ದಂತೆ ನೆಲದಮೇಲೂ ದುಷ್ಟಜಂತುಗಳಿರಬಹುದಲ್ಲ. ಯಾವ ಅಪಾಯ ಬಂದರೂ ಎದುರಿಸುವುದಕ್ಕೆ ಸಿದ್ಧವಾಗಿರಬೇಕು. ಆದ್ದರಿಂದ ನಾವು ಹೊರಡುವುದಕ್ಕೆ ಮುಂಚೆ ಏನಾದರೂ ಆಯುಧಗಳನ್ನು ಹೊಂದಿಸಿಕೊಳ್ಳಬೇಕಾಗಿತ್ತು. ಬಿಲ್ಲು ಬಾಣಗಳನ್ನು ತಯಾರುಮಾಡಿಕೊಳ್ಳಬಹುದೆಂದು ಜಾಕಿ ಸಲಹೆಕೊಟ್ಟ.

ಪೀಟರ್ ಉತ್ಸಾಹದಿಂದ ಮೇಲಕ್ಕೆದ್ದ. "ಒಪ್ಪಿದೆ ಜಾಕಿ; ನಾನು ಬಾಣ ತಯಾರುಮಾಡುತ್ತೇನೆ. ಬಿಲ್ಲು ತಯಾರುಮಾಡುವ ಕೆಲಸ ನಿನಗೆ ಬಿಟ್ಟದ್ದು. ಆಯುಧವೇನೂ ಇಲ್ಲದೆ ನನಗೂ ಕೈ ಸುಮ್ಮನೆ ಕಡಿಯುತ್ತಾ ಇದೆ. ಇದುವರೆಗೂ ಕಲ್ಲೇ ನನಗೆ ಆಯುಧವಾಗಿತ್ತು. ಆದರೆ ನಾನು ಹೊಡೆದ ಕಲ್ಲು ಯಾವ ಪ್ರಾಣಿಗೂ ತಗಲಲಿಲ್ಲ.''

"ಸುಳ್ಳು ಹೇಳಬೇಡ, ಪೀಟರ್. ಮೊನ್ನೆ ನೀನು ಕಲ್ಲೆಸೆದದ್ದರಿಂದ ನನ್ನ ಕಾಲಿಗೆ ಪೆಟ್ಟಾಯಿತು."

"ನಿನ್ನ ಕಾಲಿಗೆ ಪೆಟ್ಟಾದರೆ ಏನು ಪ್ರಯೋಜನವೋ ರೋವರ್? ನಿನ್ನ ಕಾಲನ್ನೇನು ತಿನ್ನುವುದಕ್ಕಾಗುತ್ತದೆಯೆ? ನಾನು ಯಾವುದೋ ಹಕ್ಕಿಗೆ ಗುರಿಯಿಟ್ಟು ಹೊಡೆಯುತ್ತಾ ಇದ್ದೆ. ನಿನ್ನ ಕಾಲನ್ನು ಅಲ್ಲಿಗೆ ಬರಹೇಳಿದವರು ಯಾರು? ಬಾಯಿಮುಚ್ಚಿಕೊಂಡು ಸುಮ್ಮನಿರು. ಜಾಕಿ, ನೀನು ಬಿಲ್ಲಿನ ಏರ್ಪಾಡು ಮಾಡು. ಆಗಲೇ ಸೂರ್ಯ ಇಳಿಮುಖವಾಗಿದ್ದಾನೆ. ಈಗ ಬಿಲ್ಲು ಸಿದ್ಧವಾದರೆ ನಾಳೆಯೇ ನಾವು ಪ್ರಯಾಣ ಹೊರಡಬಹುದು."

" ನಿಜ. ಆದರೆ ಕತ್ತಲಾಗುವುದರೊಳಗೆ ಒಂದು ಬಿಲ್ಲನ್ನೂ ಮಾಡಿ ಮುಗಿಸುವುದಕ್ಕಾಗುವುದಿಲ್ಲ. ಇಷ್ಟು ದಿನವೂ ಕೆಲಸ ಕಾರ್ಯ ಹೆಚ್ಚಾಗಿಲ್ಲದೆ ಇದ್ದದ್ದರಿಂದ ನಮಗೆ ದೀಪ ಬೇಕಾಗಿರಲಿಲ್ಲ. ಈಗ ಬೆಳಕಿಗೇನಾದರೂ ಸಾಧನ ಇದ್ದರೆ ಚೆನ್ನಾಗಿತ್ತು ಅನ್ನಿಸುತ್ತಾ ಇದೆ."

"ದೊಡ್ಡದಾಗಿ ಬೆಂಕಿ ಹತ್ತಿಸಿಬಿಡೋಣ. ಬೇಕಾದಷ್ಟು ಬೆಳಕು ಸಿಕ್ಕುತ್ತೆ.''

" ಬೆಳಕಿನ ಜೊತೆಗೆ ಬೇಕಾದಷ್ಟು ಸೆಕೆಯೂ ಸಿಕ್ಕುತ್ತೆ."

" ಹೌದು. ಈಗಲೇ ಸೆಕೆ ತಡೆಯುವುದಕ್ಕಾಗದಹಾಗಿದೆ ಇನ್ನು ಬೆಂಕಿ ಬೇರೆ ಹತ್ತಿಸಿಬಿಟ್ಟರೆ ಎಲ್ಲಾ ಬೆಂದು ಹೋಗುತ್ತೇವೆ. ಹಾಗಾದರೆ ಏನು ಮಾಡುವುದು, ಜಾಕಿ?''

" ನಾನೂ ಅದನ್ನೇ ಯೋಚಿಸುತ್ತಾ ಇದೇನೆ. ಈ ದೀಪಗಳಲ್ಲಿ ಒಂದು ತರಹ ಮರ ಇದೆ. ಅದರ ಕಾಯನ್ನು ಉರಿಸಿ ಇಲ್ಲಿಯ ಜನರು ಬೆಳಕು ಮಾಡಿಕೊಳ್ಳುತ್ತಾರಂತೆ. ಅದರ ವಿಷಯವೇನೋ ನನಗೆ ಗೊತ್ತು. . . "

" ಅಯ್ಯೋ ಪಾಪಿ! ಗೊತ್ತಿದ್ದರೂ ಇಷ್ಟು ದಿನ ಸುಮ್ಮನೆ ಇದ್ದೆಯಲ್ಲ, ಯಾಕೆ?"

" ಯಾಕೆ ಅಂದರೆ, ಇನ್ನೂ ಆ ಮರ ನನ್ನ ಕಣ್ಣಿಗೆ ಬಿದ್ದಿಲ್ಲ. ಅಥವಾ ನೋಡಿದ್ದರೂ ಗುರುತು ಸಿಕ್ಕದೆ ಹೋಗಿರಬಹುದು. ಅದರ ವರ್ಣನೆ ನನಗೆ ಚೆನ್ನಾಗಿ ನೆನಪಿಲ್ಲ. ಕಾಯಿಗಳೇನೋ ಬಹಳ ಚಿಕ್ಕವು. ಮರದ ಎಲೆ ಸ್ವಲ್ಪ ಬೆಳ್ಳಗಿದೆ ಅಂತ ಓದಿದ ಹಾಗೆ ಜ್ಞಾಪಕ. ಆದರೆ ನಿಶ್ಚಯವಾಗಿ ಹೇಳಲಾರೆ. ಅದಕ್ಕೆ ಮೇಣದ ಬತ್ತಿಯ ಮರ ಅಂತ ಹೆಸರು."

" ಎಲೆಗಳು ಬೆಳ್ಳಗಿವೆಯೆ? ಇವತ್ತು ಅಂಥಾದ್ದೇ ಒಂದು ಮರ ನೋಡಿದೆನಲ್ಲ!"

" ಎಲ್ಲಿ? ಇಲ್ಲಿಗೆ ತುಂಬ ದೂರವೋ?"

"ದೂರವೇನಿಲ್ಲ, ಮೂರು ನಾಲ್ಕು ಫರ್ಲಾಂಗು ಇರಬಹುದು.''

" ನಡಿ, ಹಾಗಾದರೆ. ಅಲ್ಲಿಗೆ ಹೋಗೋಣ."

ಕೊಡಲಿಯನ್ನು ತೆಗೆದುಕೊಂಡು ಮೂವರೂ ಬೇಗಬೇಗ ನಡೆದೆವು. ಹತ್ತು ನಿಮಿಷಗಳೊಳಗಾಗಿ ಪೀಟರ್ ನೋಡಿದ್ದ ಮರದ ಬಳಿಗೆ ಬಂದೆವು. ಮರವನ್ನು ಚೆನ್ನಾಗಿ ಪರೀಕ್ಷಿಸಿದ ಮೇಲೆ ಅದೇ ನಾವು ಹುಡುಕುತ್ತಿದ್ದ ಮರವೆಂದು ಜಾಕಿ ನಿಶ್ಚಯಿಸಿದ. ಅದರಲ್ಲಿ ಬೇಕಾದ ಹಾಗೆ ಬಿಟ್ಟಿದ್ದ ಕಾಯಿಗಳನ್ನು ಕೊಯ್ದು ಎಲ್ಲರೂ ಜೇಬಿಗೆ ತುಂಬಿಕೊಂಡೆವು.

"ಪೀಟರ್, ಆ ತೆಂಗಿನ ಮರ ಹತ್ತಿ ನಾಲ್ಕೈದು ಎಲೆ ಕಿತ್ತುಕೊಂಡು ಬಾ."

ಮರ ಎತ್ತರವಾಗಿದ್ದರೂ ಪೀಟರ್ ಬೇಗ ಹತ್ತಿ ಎಲೆಗಳನ್ನು ಕಿತ್ತನು. ಜಾಕಿ ಎಲೆಯ ಮಧ್ಯದಲ್ಲಿರುವ ಸಣ್ಣ ಕಡ್ಡಿಯನ್ನು ಬೇರೆ ಮಾಡಿಕೊಂಡಮೇಲೆ ಎಲ್ಲರೂ ಗುಡಿಸಲಿಗೆ ಹಿಂತಿರುಗಿದೆವು. ಸೆಕೆಯಾದರೂ ಆಗಲೆಂದು ಜಾಕಿ ಸಣ್ಣದಾಗಿ ಬೆಂಕಿ ಹತ್ತಿಸಿ ಅದರಲ್ಲಿ ನಾವು ತಂದಿದ್ದ ಕಾಯಿಗಳನ್ನು ಅರೆಬೇಗಲಾಗಿ ಬೇಯಿಸಿದನು. ಅನಂತರ ಮೇಲಿನ ಸಿಪ್ಪೆಯನ್ನು ಸುಲಿದು ನಡುವೆ ರಂಧ್ರಮಾಡಿ, ಅವುಗಳನ್ನು ತೆಂಗಿನ ಕಡ್ಡಿಗೆ ಪೋಣಿಸಿದನು. ತುದಿಯಲ್ಲಿದ್ದ ಕಾಯನ್ನು ಬೆಂಕಿಗೆ ಹಿಡಿದೊಡನೆ ಅದು ಮೇಣದಬತ್ತಿಯಂತೆ ಪ್ರಕಾಶದಿಂದ ಉರಿಯಲಾರಂಭಿಸಿತು. ಸೂರ್ಯ ಮುಳುಗುವುದಕ್ಕೆ ಇನ್ನೂ ಒಂದು ಘಂಟೆಯ ಕಾಲವಿದ್ದುದರಿಂದ ದೀಪವನ್ನು ಕೂಡಲೆ ಆರಿಸಿಬಿಟ್ಟೆವು.

"ಪೀಟರ್, ನೀನು ಬಾಣಗಳಿಗೆ ಬೇಕಾಗುವಂಥ ಕೋಲುಗಳನ್ನು ಹುಡುಕಿಕೊಂಡು ಬಾ. ಅಷ್ಟು ಹೊತ್ತಿಗೆ ನಾನು ಬಿಲ್ಲುಮಾಡುವುದಕ್ಕೆ ಸರಿಯಾದ ಸಣ್ಣ ಕೊಂಬೆಯನ್ನು ಕಡಿಯುತ್ತೇನೆ. ಈಗ ದೀಪವಿರುವದರಿಂದ ರಾತ್ರಿಯಾದ ಮೇಲೂ ಕೆಲಸಮಾಡಬಹುದು." ಎಂದು ಹೇಳಿ ಜಾಕಿ ಪೀಟರನ್ನು ಕರೆದುಕೊಂಡು ಹೊರಟನು.

ಆ ದಿನ ರಾತ್ರಿಯೇ ನಾವು ಆಯುಧಗಳನ್ನು ಸಜ್ಜುಗೊಳಿಸಿಕೊಂಡದ್ದಾಯಿತು. ನೀಳವಾಗಿ ಬೆಳೆದಿದ್ದ ಕೊಂಬೆಯನ್ನು ಕತ್ತರಿಸಿ ಜಾಕಿ ಐದು ಅಡಿ ಉದ್ದದ ಬಲವಾದ ಬಿಲ್ಲನ್ನು ಮಾಡಿ, ಜೊತೆಗೆ ಮೂರು ನಾಲ್ಕು ಬಾಣಗಳನ್ನೂ ಸಿದ್ಧಮಾಡಿಕೊಂಡನು. ಪೀಟರ್ ತನಗೆ ಬಿಲ್ಲು ಬೇಡವೆಂದು ಹೇಳಿ, ಸುಮಾರು ಹತ್ತು ಅಡಿ ಉದ್ದವಾದ ಒಂದುಕೋಲಿಗೆ

ನಾವು ಹುಟ್ಟಿನಿಂದ ತೆಗೆದಿಟ್ಟುಕೊಂಡಿದ್ದ ಕಬ್ಬಿಣದ ಚೂರನ್ನು ಸಿಕ್ಕಿಸಿ ಈಟಿಯೊಂದನ್ನು ಮಾಡಿಕೊಂಡನು. ನಾನು ಬಲವಾದ ದೊಣ್ಣೆಯೇ ಸಾಕೆಂದು ಸುಮ್ಮನಿದ್ದೆ.

ನಾವು ಈ ಕೆಲಸದಲ್ಲಿ ತೊಡಗಿದ್ದಾಗ ಇದ್ದಕ್ಕಿದ್ದ ಹಾಗೆಯೇ ದೂರದಿಂದ ಬಹಳ ವಿಚಿತ್ರವಾದ ಮತ್ತು ಭಯಂಕರವಾದ ಕೂಗು ಕೇಳಿ ಬಂತು. ಅದು ಯಾವ ಕಡೆಯಿಂದ ಬಂತೆಂದು ಹೇಳುವುದು ಕಷ್ಟ. ಸಮುದ್ರದ ಕಡೆಯಿಂದಲೇ ಬಂದ ಹಾಗೆ ತೋರಿತು. ನಾವೆಲ್ಲರೂ ತಕ್ಷಣ ಹೊರಗೆ ಬಂದು ಸಮುದ್ರತೀರಕ್ಕೆ ಓಡಿಹೋಗಿ ಅಲ್ಲಿಯೇ ಕಿವಿಗೊಟ್ಟು ಕೇಳುತ್ತಾ ನಿಂತೆವು. ಒಂದೆರಡು ನಿಮಿಷಗಳಲ್ಲಿಯೇ ಇನ್ನೊಂದು ಸಲ ಅದೇ ಕೂಗು ಕೇಳಿಸಿತು. ಅಷ್ಟುಹೊತ್ತಿಗೆ ಚಂದ್ರ ಹುಟ್ಟಿದ್ದುದರಿಂದ ಒಳಗಡಲಿನಲ್ಲಿದ್ದ ಸಣ್ಣಸಣ್ಣ ದ್ವೀಪಗಳೆಲ್ಲಾ ತಕ್ಕ ಮಟ್ಟಿಗೆ ಸ್ಪಷ್ಟವಾಗಿಯೇ ಕಾಣುತ್ತಿದ್ದವು. ಆದರೆ ಆ ಕೂಗಿಗೆ ಕಾರಣ ವೇನೆಂದು ಕಂಡುಹಿಡಿಯುವಂತಿರಲಿಲ್ಲ. ಯಾವುದೋ ಹತ್ತಿರದ ದ್ವೀಪದಿಂದಲೇ ಬಂದಿರಬೇಕು.

ನಾವೆಲ್ಲರೂ ಭಯದಿಂದ ಸ್ವಲ್ಪ ನಡುಗಿ ಒಬ್ಬರಿಗೊಬ್ಬರು ಹತ್ತಿರ ಸರಿದು ನಿಂತೆವು.

"ಅದೇನಿರಬಹುದು ಜಾಕಿ?" ಪೀಟರ್ ಸಣ್ಣದನಿಯಲ್ಲಿ ಕೇಳಿದ.

"ಏನೋ ತಿಳಿಯದು. ನಾನು ಹಿಂದೆಯೇ ಆ ಸದ್ದನ್ನು ಎರಡು ಸಲ ಕೇಳಿದ್ದೆ. ಆಗ ಅದು ಇನ್ನೂ ದೂರದಿಂದ ಬಂದಹಾಗಿತ್ತು. ಇವೊತ್ತಿನಷ್ಟು ಗಟ್ಟಿಯಾಗಿ ಕೇಳಲಿಲ್ಲ. ನಿಜವಾಗಿ ಸದ್ದು ಕೇಳಿತೋ ಅಥವಾ ಅದು ನನ್ನ ಮನಸ್ಸಿನ ಭ್ರಾಂತಿಯೋ ಎಂದು ನನಗೆ ಸಂದೇಹ ವಾಯಿತು. ನಿಮಗೆ ಹೇಳಿದರೆ ನೀವು ಹೆದರಬಹುದು ಎಂದುಕೊಂಡು ಸುಮ್ಮನಿದ್ದೆ."

ಮತ್ತೇನಾದರೂ ಆ ಸದ್ದು ಕೇಳಬಹುದೆಂದು ಬಹಳ ಹೊತ್ತು ಅಲ್ಲಿಯೇ ನಿಂತೆವು. ಆದರೆ ಅದು ಪುನಃ ಕೇಳಿಬರಲಿಲ್ಲವಾದ್ದರಿಂದ ನಾವು ಗುಡಿಸಲಿಗೆ ವಾಪಸು ಬಂದೆವು. ಪೀಟರಿನ ಮನಸ್ಸಿನಲ್ಲಿ ಇನ್ನೂ ಹೆದರಿಕೆ.

"ಅದೇನು ಭಯಂಕರವಾದ ಕೂಗು, ರೋವರ್! ಯಾವುದಾದರೂ ಪಿಶಾಚಿಯಿರಬಹುದೆ?"

"ಇಲ್ಲ. ನನಗೆ ಪಿಶಾಚಿಗಳಿವೆಯೆಂಬ ನಂಬಿಕೆಯೇ ಇಲ್ಲ. ಆದರೂ ಆ ಸದ್ದನ್ನು ಕೇಳಿ ನನಗೂ ಭಯವಾಗುತ್ತಿದೆ. ಅದು ಏನಿರಬಹುದೋ ಹೇಳುವುದಕ್ಕಾಗುವುದಿಲ್ಲ.''

"ನಿನಗೇನು ತೋರುತ್ತೆ, ಜಾಕಿ?"

"ನನಗೆ ಪಿಶಾಚಿಗಳಲ್ಲಿ ನಂಬಿಕೆಯಿಲ್ಲ. ಹೆದರಿಕೆಯಂತೂ ಇಲ್ಲವೇ ಇಲ್ಲ. ಇದುವರೆಗೆ ನಾನು ಎಂದೂ ಪಿಶಾಚಿಯನ್ನು ನೋಡಿಲ್ಲ; ಪಿಶಾಚಿಯನ್ನು ನೋಡಿದ ಜನರನ್ನೂ ಕಾಣೆ. ವಿಚಿತ್ರವಾದದ್ದು ಏನಾದರೂ ಕಂಡರೆ ಅಥವಾ ಕೇಳಿದರೆ ನಾವು ಅದನ್ನು ಪಿಶಾಚಿ ಎಂದು ಬಿಡುತ್ತೇವೆ. ಈ ಸದ್ದಿಗೆ ಏನೋ ಸಾಮಾನ್ಯವಾದ ಕಾರಣವಿರಬೇಕು. ಅದು ತಿಳಿಯದೆ ಇರುವುದರಿಂದ ಈಗ ನಿಮ್ಮ ಮನಸ್ಸಿಗೆ ಹೆದರಿಕೆ ಹುಟ್ಟಿದೆ. ನಾವು ನಿಧಾನವಾಗಿ ಯೋಚಿಸಿದರೆ ಅದಕ್ಕೆ ಕಾರಣ ತಿಳಿದೇ ತಿಳಿಯುತ್ತದೆ. ಹೆದರದೆ ಮಲಗಿಕೊಳ್ಳಿ."

ಜಾಕಿ ಧೈರ್ಯವಾಗಿದ್ದುದನ್ನು ನೋಡಿ ನಾವೂ ಮನಸ್ಸನ್ನು ಹದಕ್ಕೆ ತಂದುಕೊಂಡು ಮಲಗಿದೆವು. ನಿದ್ದೆ ಬರುವುದು ಸ್ವಲ್ಪ ಕಷ್ಟವೇ ಆಯಿತು.

ಮಾರನೆಯ ದಿನ ಸೂರ್ಯನ ಮೊದಲ ಕಿರಣಗಳು ಸಾಗರದ ಅಲೆಗಳ ಮೇಲೆ ಬೀಳುವುದರೊಳಗೆ ನಾವು ಮೂವರೂ ಎದ್ದು ಗುಡಿಸಲಿನ ಹತ್ತಿರದಲ್ಲೇ ಸಮುದ್ರ ಸ್ನಾನವನ್ನು ಮುಗಿಸಿದೆವು. ಬಿಸಿಲೇರುವುದರೊಳಗೆ ಸ್ವಲ್ಪ ದೂರ ನಡೆದಿರಬೇಕೆಂದು ಬೇಗಬೇಗ ಬೆಳಗಿನ ಉಪಹಾರವನ್ನು ಮುಗಿಸಿಕೊಂಡು ಹೊರಟೆವು. ದಾರಿಯುದ್ದಕ್ಕೂ ತೆಂಗಿನ ಮರಗಳು ಇದ್ದುದರಿಂದ ಬುತ್ತಿ ಕಟ್ಟಿಕೊಳ್ಳುವ ತೊಂದರೆಯೇನೂ ಇರಲಿಲ್ಲ. ಜಾಕಿ ತನ್ನ ಉಡುಪಿನ ಜೊತೆಗೆ ತೆಂಗಿನ ಬಟ್ಟೆಯ ಬೆಲ್ಟು ಮಾಡಿಕೊಂಡು ಅದರಲ್ಲಿ ಕೊಡಲಿಯನ್ನು ಸಿಕ್ಕಿಸಿ ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದನು. ಪೀಟರಿನ ಒಂದು ಕೈಯಲ್ಲಿ ಈಟಿ, ಇನ್ನೊಂದು ಕೈಯಲ್ಲಿ ಬಲವಾದ ಲಾಠಿ. ನಾನು ಲಾಠಿಯನ್ನು ಮಾತ್ರ ತೆಗೆದುಕೊಂಡೆ.

ಸುಮಾರು ಅರ್ಧ ಮೈಲಿ ನಡೆದ ಮೇಲೆ ನಮ್ಮ ಮುಂದೆ ಸುಂದರ ವಾದ ಸಣ್ಣ ಕಣಿವೆ ಕಾಣಿಸಿತು. ಆ ಕಣಿವೆಯನ್ನು ಸಾವಧಾನವಾಗಿ ಪರೀಕ್ಷಿಸಬೇಕೆಂದು ಹೊರಡುವಷ್ಟರಲ್ಲಿಯೇ ಪೀಟರ್ ನಮ್ಮನ್ನು ಕೂಗಿದ.

" ಅಲ್ಲಿ ಕಾಣುವುದೇನು, ನಿಮಗೆ ಯಾರಿಗಾದರೂ ಗೊತ್ತೆ ? " ಎಂದು ಸಮುದ್ರತೀರದ ಕಡೆಗೆ ಏನನ್ನೋ ಇರಿಯುವವನಂತೆ ಈಟಿ ಯನ್ನು ಚಾಚಿ ತೋರಿಸಿದನು. ಅವನ ಮಾತು ಮುಗಿಯುವದರೊಳಗೆ ತೀರದ ಬಳಿ ಇದ್ದ ಬಂಡೆಗಳಿಂದ ನೀರಿನ ತುಂತುರುಗಳಂತೆ ಅಥವಾ ಹಬೆಯಂತೆ ಇದ್ದ ಒಂದು ಬಿಳಿಯ ಕಂಬ ಹತ್ತು ಹನ್ನೆರಡು ಅಡಿಗಳ ಎತ್ತರ ಮೇಲಕ್ಕೆ ಹಾರಿ ಇದ್ದಕ್ಕಿದ್ದ ಹಾಗೆಯೇ ಕಣ್ಮರೆಯಾಯಿತು. ಸಮುದ್ರದ ಹತ್ತಿರದಲ್ಲೇ ಹೀಗಾಗಿದ್ದರೆ ಏನೂ ಆಶ್ಚರ್ಯಕ್ಕೆ ಕಾರಣ ವಿರುತ್ತಿರಲಿಲ್ಲ. ಆ ಸ್ಥಳದಲ್ಲಿ ಬಂಡೆಯ ಸಾಲು ದಡಕ್ಕೆ ಹತ್ತಿರವಿದ್ದು ದಡಕ್ಕೆ ಸೇರಿಯೇ ಇತ್ತೆಂದು ಹೇಳಿದರೂ ತಡೆಯುವಂತಿತ್ತು. ಆ ಭಾಗ ದಲ್ಲಿ ಒಳಗಡಲು ಇರಲೇ ಇಲ್ಲವೆನ್ನಬಹುದು. ಸಮುದ್ರದ ದೊಡ್ಡ ಅಲೆ ಗಳು ಯಾವ ತಡೆಯೂ ಇಲ್ಲದೆ ದಡದ ಮೇಲೆಯೇ ಬಡಿಯುತ್ತಿದ್ದವು. ಆದ್ದರಿಂದ ದಡದ ಬಳಿಯಲ್ಲೇ ಬಿಳಿಯ ಕಂಬ ಕಾಣಿಸಿಕೊಂಡಿದ್ದರೆ, ಅದು ಅಲೆಗಳಿಂದ ಹೊರಟ ತುಂತುರು ಎನ್ನಬಹುದಾಗಿತ್ತು. ಆದರೆ ನಾವು ಅದನ್ನು ನೋಡಿದ್ದು ತೀರದಿಂದ ಸುಮಾರು ಐವತ್ತು ಗಜ ಒಳ ಭಾಗದಲ್ಲಿ. ಅಲ್ಲಿ ಬಂಡೆಗಳು ಬಹಳ ಒರಟೊರಟಾಗಿ ದಡದಿಂದ ಸಮುದ್ರದೊಳಕ್ಕೆ ಚಾಚಿಕೊಂಡಿದ್ದವು. " ಇದೇನಾಶ್ಚರ್ಯ! " ಎಂದು ನೋಡುತ್ತಿರುವಷ್ಟರಲ್ಲೇ ನಾವು ಮೊದಲು ಕಂಬವನ್ನು ನೋಡಿದ ಸ್ಥಳ ದಿಂದ ಕೆಲವು ಅಡಿಗಳ ದೂರದಲ್ಲಿ ಮತ್ತೊಂದು ಬಿಳಿಯ ಕಂಬ ಮೇಲಕ್ಕೆ ಹೊರಟು ಕ್ಷಣಮಾತ್ರ ಕಾಣಿಸಿಕೊಂಡು ಅದೃಶ್ಯವಾಯಿತು. ಹೀಗೆಯೇ ನಿಮಿಷಕ್ಕೊಂದು ಸಾರಿ ಕಂಬಗಳು ಏಳುತ್ತಲೇ ಇದ್ದವು. ಸ್ವಲ್ಪ ಹೊತ್ತು ಈ ವಿಚಿತ್ರವನ್ನು ನೋಡಿದ ಮೇಲೆ ಅವು ನೀರು ಅಥವಾ ತುಂತುರಿನಿಂದ ಆಗಿರಬೇಕೆಂದು ಮನಸ್ಸಿಗೆ ದೃಢವಾಯಿತು. ಆದರೆ ಹಾಗೆ ಏಳುವುದಕ್ಕೆ ಕಾರಣವೇನೆಂದು ಊಹಿಸುವುದಕ್ಕಾಗಲಿಲ್ಲ. ಹತ್ತಿರ ಹೋಗಿ ನೋಡಿಬಿಡಬೇಕೆಂದು ಹೊರಟೆವು.

ಬಂಡೆಗಳು ಬಹಳ ಒರಟಾಗಿಯೂ ಸಮುದ್ರದ ಕಡೆ ಬಹು ಕಡಿದಾಗಿಯೂ ಇದ್ದುವು. ಅಲ್ಲೆಲ್ಲಾ ಸಂತತವಾಗಿ ನೀರು ಬಿದ್ದು ಒದ್ದೆಯಾಗಿದ್ದುದರಿಂದ ನಮ್ಮ ಜೋಡುಗಳೆಲ್ಲಾ ನೆನೆದುಹೋದವು. ನೆಲದಲ್ಲಿ ಅಲ್ಲಲ್ಲಿಯೇ ಸಣ್ಣಸಣ್ಣ ರಂಧ್ರಗಳು. ಮತ್ತೆ ಕಂಬಗಳು ಎಲ್ಲಿ ಏಳುವುವೋ ಎಂದು ಆತುರದಿಂದ ನೋಡುತ್ತ ನಿಂತೆವು. ಇದ್ದಕ್ಕಿದ್ದ ಹಾಗೆಯೇ ನೆಲದೊಳಗೆ ದೂರದ ಗುಡುಗಿನಂತೆ ಒಂದು ಶಬ್ದ ಪ್ರಾರಂಭವಾಗಿ ಹತ್ತಿರಬಂದಹಾಗೆಲ್ಲಾ ಕುದಿಯುವ ನೀರಿನಂತೆ ಮೊರೆಯುವುದಕ್ಕೆ ಆರಂಭವಾಯಿತು. ಒಂದು ಕ್ಷಣದಲ್ಲೇ ಸಾವಿರ ಸರ್ಪಗಳು ಒಟ್ಟಿಗೆ ಬುಸುಗುಟ್ಟಿದಂತಾಗಿ ದಪ್ಪ ನೀರಿನ ಚಿಲುಮೆಯೊಂದು ಬಿಲ್ಲಿನಿಂದ ಹೊರಟ ಬಾಣದ ವೇಗದಿಂದ ಮೇಲಕ್ಕೆ ಹಾರಿತು. ಜಾಕಿಯೂ ನಾನೂ ಅದರ ಹತ್ತಿರದಲ್ಲೇ ನಿಂತಿದ್ದುದರಿಂದ ಅದು ನಮ್ಮನ್ನು ಮುಟ್ಟಿಕೊಂಡೇ ಹೋಯಿತು. ನಾವು ಹೆದ[illegible] ತಕ್ಷಣವೇ ಆ ಸ್ಥಳದಿಂದ ಹಾರಿದೆವು. ಆದರೆ ನೀರು ನಮ್ಮ ಮೇಲೆ ಬೀಳದಂತೆ ತಪ್ಪಿಸಿಕೊಳ್ಳುವುದಕ್ಕಾಗಲಿಲ್ಲ. ಕಂಬ ಒಂದು ಕ್ಷಣದಲ್ಲೇ ಇಳಿದು ನಮ್ಮಿಬ್ಬರನ್ನೂ ಸಂಪೂರ್ಣವಾಗಿ ತೋಯಿಸಿತು. ಪೀಟರ್ ಸ್ವಲ್ಪ ದೂರದಲ್ಲಿ ನಿಂತಿದ್ದುದರಿಂದ ಅವನ ಮೇಲೆ ಒಂದೆರಡು ಹನಿಗಳು ಮಾತ್ರ ಬಿದ್ದವು. ಅವನಿಗೆ ತಾನು ನೀರಿಗೆ ಸಿಕ್ಕದೆ ಪಾರಾದ ಸಂತೋಷದ ಜೊತೆಗೆ ನಾವಿಬ್ಬರೂ ನೆನೆದು ಕಣ್ಣುಕಣ್ಣು ಬಿಡುವುದನ್ನು ನೋಡಿದ ಸಂತೋಷ ಬೇರೆ. ಹುಚ್ಚುಹುಚ್ಚಾಗಿ ನಗಲಾರಂಭಿಸಿದನು.

" ಜೋಕೆ, ಮತ್ತೆ ಸಿಕ್ಕಿಬಿದ್ದೀರಿ, ಅಗೋ ಅಲ್ಲಿ ಇನ್ನೊಂದು ಕಂಬ ಏಳುತ್ತಿದೆ!" ಎಂದನು. ಅವನ ಮಾತು ಮುಗಿಯುವುದರೊಳಗೆ ನಮ್ಮ ಹತ್ತಿರದಲ್ಲೇ ಇನ್ನೊಂದು ಬುಗ್ಗೆ ಹೊರಟು ನಮಗೆ ಮತ್ತೊಂದು ಸಾರಿ ಸ್ನಾನಮಾಡಿಸಿತು. ಪೀಟರಿನ ಸಂತೋಷಕ್ಕೆ ಮಿತಿಯೇ ಇಲ್ಲ. ನಗುವನ್ನು ತಡೆಯಲಾರದೆ ಹೋದ.

ಅವನು ನಿಂತಿದ್ದ ಸ್ಥಳದ ಹತ್ತಿರದಲ್ಲೇ ಗುಡುಗಿನ ಶಬ್ದ ಕೇಳಿಬಂತು. ಪೀಟರಿನ ನಗು ಇದಕ್ಕಿದ್ದ ಹಾಗೇ ನಿಂತುಹೋಯಿತು.

" ಈಗೆಲ್ಲಿ ಹೊರಡುವುದಪ್ಪಾ, ಈ ಹಾಳು ನೀರು!'' ಎನ್ನುತ್ತಾ

ತನ್ನ ಸುತ್ತಮುತ್ತ ಬಹಳ ಚಿಂತೆಯಿಂದ ನೋಡಿದನು. ಅವನನ್ನು ನೋಡಿದರೆ ಪಲಾಯನಕ್ಕೆ ಸಿದ್ಧಮಾಡಿಕೊಳ್ಳುವಂತಿತ್ತು. ಮತ್ತೆ ಆ ವಿಚಿತ್ರವಾದ ಬುಸುಗುಟ್ಟುವ ಶಬ್ದ, ಅದರ ಹಿಂದೆಯೇ ಭಯಂಕರವಾದ ಬುಗ್ಗೆ—ಈ ಸಾರಿ ಪೀಟರಿನ ಕಾಲುಗಳ ನಡುವೆಯೇ ಎದ್ದು ಪರದೆ ಯೆಳೆದಂತೆ ಅವನನ್ನು ಮುಚ್ಚಿದ್ದಲ್ಲದೆ ಕೆಲವು ಅಡಿಗಳ ಮಟ್ಟಕ್ಕೆ ಎತ್ತಿ ಒಗೆದುಬಿಟ್ಟಿತು. ಅವನು ಬಿದ್ದ ರಭಸವನ್ನು ನೋಡಿ ಮೂಳೆಗಳೆಲ್ಲಾ ನುಚ್ಚು ನೂರಾಗಿರಬೇಕೆಂದು ಹೆದರಿ ನಾವಿಬ್ಬರೂ ಅವನ ಸಹಾಯಕ್ಕೆ ಓಡಿದೆವು. ಆದರೆ ಪುಣ್ಯವಶಾತ್ ಅವನು ಬಿದ್ದ ಕಡೆ ಒಂದು ಪೊದೆ ಬೆಳೆದಿದ್ದುದರಿಂದ ಅವನಿಗೆ ಅಪಾಯವೇನೂ ಆಗಿರಲಿಲ್ಲ. ಈಗ ನಗುವುದಕ್ಕೆ ನಮ್ಮ ಸರದಿ. ಆದರೂ ಅವನಿಗೇನಾದರೂ ಗಾಯ ವಾಗಿರಬಹುದೆಂಬ ಹೆದರಿಕೆಯಿಂದ ನಗುವನ್ನು ತಡೆದುಕೊಂಡೆವು. ಅಷ್ಟೇ ಅಲ್ಲದೆ ಮುಂದಿನ ಘಳಿಗೆಯಲ್ಲಿ ಇನ್ನೊಂದು ಬುಗ್ಗೆ ಏಳಬಹು ದೆಂಬ ಭಯ ಬೇರೆ ಇದ್ದುದರಿಂದ ಪೀಟರನ್ನು ಎಬ್ಬಿಸಿಕೊಂಡು ಆ ಸ್ಥಳವನ್ನು ಬಿಟ್ಟು ಓಡಿದೆವು.

"ಈಗೇನು ಮಾಡೋಣ?" ಪೀಟರ್ ಕಕ್ಕುಬಿಕ್ಕಾಗಿ ಕೇಳಿದ.

"ಮಾಡುವುದೇನು, ಗೊತ್ತೇ ಇದೆ. ಮೊದಲು ಬೆಂಕಿ ಹತ್ತಿಸಿ ಬಟ್ಟೆಗಳನ್ನೆಲ್ಲಾ ಒಣಗಿಸಿಕೊಳ್ಳಬೇಕು."

ಬಟ್ಟೆಗಳು ಒಣಗಬೇಕಾದರೆ ಒಂದು ಘಂಟೆಯ ಕಾಲ ಹಿಡಿಯಿತು. ಅಷ್ಟು ಕಾಲ ಸುಮ್ಮನೆ ಕುಳಿತಿರುವ ಬದಲು ನಮಗೆ ಈ ವಿಚಿತ್ರ ಅನುಭವವಾದ ಸ್ಥಳಕ್ಕೆ ಮತ್ತೆ ಹೋಗಿ ಅದಕ್ಕೆ ಕಾರಣ ಕಂಡು ಹಿಡಿಯುವ ಪ್ರಯತ್ನ ಮಾಡಿದೆವು. ನಾವು ನೋಡಿದ್ದರಲ್ಲಿ ಸಮುದ್ರದಿಂದ ಅಲೆ ಬಂದು ದಡಕ್ಕೆ ಅಪ್ಪಳಿಸಿದ ಕೂಡಲೆ ಬುಗ್ಗೆಗಳು ಹೊರಡುತ್ತಿದ್ದವು. ಒಂದು ಸಾರಿಯೂ ಅಲೆ ಹೊಡೆಯುವುದಕ್ಕೆ ಮುಂಚೆ ಬುಗ್ಗೆ ಏಳಲಿಲ್ಲ. ಅಲ್ಲದೆ ಬಹಳ ದೊಡ್ಡದಾದ ಅಲೆ ಬಡಿದ ಮೇಲೆ ಬುಗ್ಗೆ ಏಳುತ್ತಿತ್ತೇ ಹೊರತು ಸಣ್ಣ ಸಣ್ಣ ಅಲೆಗಳು ಬಂದರೆ ಏನೂ ಆಗುತ್ತಿರಲಿಲ್ಲ. ಇದನ್ನು ನೋಡಿದ ಮೇಲೆ ಹಾಗಾಗುವುದರ ಕಾರಣವನ್ನು ಊಹಿಸುವುದು ಸಾಧ್ಯವಾಯಿತು. ಆ ಬಂಡೆಯ ಕೆಳಗೆ ನೀರು ಒಳಗೆ ಬರುವಂತೆ

ದಾರಿಯಿರಬೇಕು. ದೊಡ್ಡ ದೊಡ್ಡ ಅಲೆಗಳು ಬಂದಾಗ ನೀರು ಈ ಕಾಲುವೆಯೊಳಗೆ ನುಗ್ಗುತ್ತದೆ; ಅದಕ್ಕೆ ಮುಂದೆ ಹೋಗಲು ಬೇರೆ ಯಾವ ದಾರಿಯೂ ಇಲ್ಲದ್ದರಿಂದ ಬಂಡೆಯಲ್ಲಿದ್ದ ರಂಧ್ರಗಳ ಮೂಲಕ ರಭಸದಿಂದ ಆಕಾಶಕ್ಕೆ ಹಾರುತ್ತದೆ. ಇದಕ್ಕಿಂತ ಹೆಚ್ಚು ಸಮಂಜಸವಾದ ಕಾರಣ ನಮ್ಮ ಮನಸ್ಸಿಗೆ ತೋರಲಿಲ್ಲ. ಆದ್ದರಿಂದ ನಮ್ಮ ಊಹೆ ಸರಿಯೆಂದೇ ಭಾವಿಸಿಕೊಂಡೆವು.

ಅಲ್ಲಿಂದ ಇನ್ನೇನು ಹೊರಡಬೇಕು ಅನ್ನುವಷ್ಟರಲ್ಲಿ ಮತ್ತೊಂದು ಸಂಗತಿ ನಡೆಯಿತು. ದಡದಿಂದ ಮುಂದಕ್ಕೆ ಚಾಚಿಕೊಂಡಿದ್ದ ಬಂಡೆಯೊಂದರ ಮೇಲೆ ನಿಂತು ನೀರನ್ನು ಬಗ್ಗಿ ನೋಡುತ್ತಿದ್ದ ಜಾಕಿ ನಮ್ಮನ್ನು ಕೂಗಿದ. "ಇಲ್ಲಿ ನೋಡು ಬಾ, ರೋವರ್. ನೀರಿನಲ್ಲಿರುವುದೇನು? ಷಾರ್ಕ್ ಇರಬಹುದೆ?"

ನಾನು ಓಡಿಹೋಗಿ ನೋಡಿದೆ. ಬಂಡೆಯ ಬಳಿ ಸುಮಾರು ಏಳೆಂಟು ಅಡಿಗಳ ಕೆಳಗೆ ಸ್ವಲ್ಪ ತಿಳಿಹಸುರಾದದ್ದು ಏನೋ ಇತ್ತು. ನೋಡಿದರೆ ಕ್ಷಣಕ್ಷಣಕ್ಕೂ ಸ್ವಲ್ಪ ಅಲುಗಾಡುವಂತೆ ಕಂಡಿತು.

"ಯಾವುದೋ ಜಾತಿಯ ಮೀನಿರಬೇಕು, ಜಾಕಿ."

"ಪೀಟರ್, ನಿನ್ನ ಈಟಿ ತೆಗೆದುಕೊಂಡು ಬಾ. ಅದಕ್ಕೆ ಸ್ವಲ್ಪ ಕೆಲಸ ಕೊಡೋಣ."

ಪೀಟರ್ ಈಟಿಯನ್ನೇನೊ ತಂದ. ಆದರೆ ಆ ಹಸುರು ಪದಾರ್ಥ ಬಹಳ ಆಳದಲ್ಲಿದ್ದುದರಿಂದ ಈಟಿಯಿಂದ ಅದನ್ನು ಮುಟ್ಟುವುದಕ್ಕಾಗಲಿಲ್ಲ. ಆದರೂ ಅದನ್ನು ಪರೀಕ್ಷಿಸಿಯೇ ತೀರಬೇಕೆಂದು ಹಟ ತೊಟ್ಟ ಜಾಕಿ ಬಲವಾಗಿ ಇರಿಯುವಂತೆ ಈಟಿಯನ್ನು ಅದರ ಮೇಲೆ ಎಸೆದನು. ಅವನು ಚೆನ್ನಾಗಿ ಗುರಿಯಿಟ್ಟೇ ಹೊಡೆದನಾದರೂ ಆ ವಸ್ತುವಿಗೆ ಈಟಿ ತಗಲಿದಂತೆ ಕಾಣಲಿಲ್ಲ. ಈಟಿ ಮೇಲಕ್ಕೆದ್ದಿತು. ಆದರೆ ಆ ತಿಳಿಹಸುರಿನ ವಸ್ತುವೋ ಪ್ರಾಣಿಯೋ ಮೊದಲಿದ್ದ ಸ್ಥಳದಲ್ಲೇ ತನ್ನ ಬಾಲವನ್ನು ಅಲ್ಲಾಡಿಸುತ್ತಾ ನಿಶ್ಚಿಂತೆಯಾಗಿತ್ತು.

"ಇದೇನು ವಿಚಿತ್ರ!"

ವಿಚಿತ್ರವೇನೋ ಹೌದು. ನಾನು ಮತ್ತು ಪೀಟರ್ ಈಟಿಯನ್ನು

ತೆಗೆದುಕೊಂಡು ಮತ್ತೆ ಮತ್ತೆ ಅದರ ಮೇಲೆ ಪ್ರಯೋಗಿಸಿದೆವು. ನಮ್ಮ ಈಟಿ ಮತ್ತೆ ಕೈಗೆ ಬಂದದ್ದೊಂದೇ ಫಲವಾಯಿತೇ ಹೊರತು, ಆ ವಸ್ತುವಿಗೆ ಯಾವ ರೀತಿಯಲ್ಲೂ ಪೆಟ್ಟಾಗಲಿಲ್ಲ. ಅದು ಆ ಸ್ಥಳವನ್ನು ಬಿಟ್ಟು ಕದಲಲೂ ಇಲ್ಲ. ಕೊನೆಗೂ ಅದು ಏನೆಂದು ಪತ್ತೆಮಾಡಲಾರದೆ ಅಲ್ಲಿಂದ ಹೊರಡಬೇಕಾಯಿತು. ಆದರೆ ಇನ್ನೊಂದು ಸಲ ಅಲ್ಲಿಗೆ ಬಂದು ಶೋಧನೆ ನಡೆಸಬೇಕೆಂದು ನಿರ್ಧರಿಸಿಕೊಂಡು ಮತ್ತೆ ಕಣಿವೆಯ ಕಡೆ ತಿರುಗಿದೆವು.

ನಾವು ಆ ಕಣಿವೆಯನ್ನು ಪರೀಕ್ಷಿಸಿದ್ದರಿಂದ ಬಹಳ ಅನುಕೂಲವಾಯಿತು. ಅದರಲ್ಲಿ ನಾವು ಮೊದಲೇ ನೋಡಿದ್ದ ತೆಂಗು, ಬ್ರೆಡ್‌ಮರ ಮುಂತಾದುವಲ್ಲದೆ ಕೆಲವು ಹೊಸ ಮರಗಳೂ ಬೆಳೆದಿದ್ದವು. ದಕ್ಷಿಣ ದ್ವೀಪದವರು ಆಹಾರಕ್ಕಾಗಿ ಉಪಯೋಗಿಸುವ ಟಾರೋ ಎಂಬ ಗಿಡದ ವರ್ಣನೆಯನ್ನು ಜಾಕ್ ಎಲ್ಲೋ ಓದಿದ್ದನಂತೆ. ಆ ಗಿಡವನ್ನೂ ಅಲ್ಲಿ ಪತ್ತೆಮಾಡಿದೆವು. ಅದರ ಜೊತೆಗೆ ಅಲ್ಲಲ್ಲೇ ಗೆಣಸಿನ ಬಳ್ಳಿಯೂ ಆಲೂಗಡ್ಡೆಯಂತಿದ್ದ ಇನ್ನೊಂದು ಗಿಡವೂ ಬೇಕಾದ ಹಾಗೆ ಬೆಳೆದಿದ್ದವು.

ಆ ವೇಳೆಗೆ ಸೂರ್ಯ ಇಳಿಮುಖನಾಗುತ್ತಿದ್ದನು. ಕಣಿವೆಯ ಕಾಡಿನಲ್ಲಿ ಸಾವಿರಾರು ಸೊಳ್ಳೆಗಳು ಆಗಲೇ ಗುಂಗುಟ್ಟುತ್ತಿದ್ದವು. ರಾತ್ರಿಯಾದ ಮೇಲೆ ಅವುಗಳ ಕಾಟವನ್ನು ತಡೆಯುವುದು ಕಷ್ಟ. ಆದ್ದರಿಂದ ರಾತ್ರಿಯನ್ನು ಸಮುದ್ರತೀರದ ಬಳಿಯಲ್ಲೇ ಕಳೆಯುವುದು ಒಳ್ಳೆಯದೆಂದುತೋರಿ ನಾವು ಮತ್ತೆ ಕಣಿವೆಯಿಂದ ಮರಳಿದೆವು. ದಾರಿಯಲ್ಲಿ ಕಣಿವೆಯ ಕಡೆಗೆ ಹಾರಿಹೋಗುತ್ತಿದ್ದ ಬಗೆಬಗೆಯ ಹಕ್ಕಿಗಳನ್ನು ಕಂಡೆವು. ಮರದ ಎಲೆಗಳ ಬಣ್ಣವೇ ನಮ್ಮನ್ನು ಮುಗ್ಧರನ್ನಾಗಿ ಮಾಡಿತ್ತು. ಇನ್ನು ಆ ಹಕ್ಕಿಗಳ ಗರಿಗಳ ಬಣ್ಣವನ್ನು ಬಣ್ಣಿಸುವುದಾದರೂ ಹೇಗೆ! ಸಂಜೆಯ ಬಿಸಿಲಿನಲ್ಲಿ ಮನೋಹರವಾಗಿ ಹೊಳೆಯುತ್ತಿದ್ದ ಹಸುರು, ನೀಲಿ, ಕೆಂಪು, ಚಿನ್ನದ ಬಣ್ಣಗಳನ್ನುಳ್ಳ ಆ ಹಕ್ಕಿಗಳನ್ನು ನೋಡಿ ಆನಂದಪಡುವುದರಲ್ಲಿ ನಮ್ಮ ದಾರಿ ಮುಂದುವರಿಯಲೇ ಇಲ್ಲದು ಕಾಮನ ಬಿಲ್ಲಿನ ಬಣ್ಣಗಳೆಲ್ಲವನ್ನೂ ಕದ್ದು ಈ ಹಕ್ಕಿಗಳು ಅಂತರಿಕ್ಷದಲ್ಲಿ ಹಾರಾಡುವ ತೋರಣಗಳನ್ನು ಸೃಷ್ಟಿಸುತ್ತಿವೆಯೋ ಎನ್ನುವಂತಿತ್ತು. ಅವುಗಳ ಗಾನವೂ

ಕಿವಿಗೆ ಬಹಳ ಇಂಪು. ಕಣಿವೆಯ ಮಧ್ಯದಲ್ಲಿ ಇತರ ಮರಗಳೆಲ್ಲಕ್ಕಿಂತಲೂ ದೊಡ್ಡದಾಗಿ ಒಂದು ಮಹಾವೃಕ್ಷ ನಿಂತಿತ್ತು. ಅದರ ಕಾಂಡವು ಮಧ್ಯದಲ್ಲಿ ಸುಮಾರು ಐದು ಅಡಿ ದಪ್ಪವಿರಬಹುದು. ಅದರ ಕೊಂಬೆಗಳಲ್ಲೆಲ್ಲಾ ಚೆನ್ನಾಗಿ ಮಾಗಿ ಹಳದಿಯ ಬಣ್ಣವನ್ನು ತಾಳಿದ್ದ ಹಣ್ಣುಗಳಿದ್ದವು. ನೋಡಿದರೆ ಪ್ಲಮ್ ಜಾತಿಯ ಮರವೆಂದು ತೋರಿತು. ತಿನ್ನುವುದಕ್ಕೆ ಬಹಳ ರುಚಿಯಾಗಿದ್ದುದರಿಂದ ಎಲ್ಲರೂ ಜೇಬುಗಳ ತುಂಬ ಹಣ್ಣು ತುಂಬಿಕೊಂಡು ಅಲ್ಲಿಂದ ಮುಂದೆ ನಡೆದೆವು.

ನಾವು ಪ್ಲಮ್ ಹಣ್ಣುಗಳನ್ನು ಕೊಯ್ಯುತ್ತಿದ್ದಾಗ, ಮುಂಚಿತವಾಗಿ ತೀರದ ಬಳಿಗೆ ಹೋಗಿ ಬೆಂಕಿ ಹತ್ತಿಸಿ ಸಿದ್ಧಮಾಡಲೆಂದು ಪೀಟರನ್ನು ಕಳುಹಿಸಿದ್ದೆವು. ನಾವು ಬರುವ ವೇಳೆಗೆ ಬೆಂಕಿ ಸಿದ್ಧವಾಗಿತ್ತು. ಪೀಟರ್ ಬಹಳ ತೊಂದರೆ ತೆಗೆದುಕೊಂಡು ನಾವು ರಾತ್ರಿ ಅಲ್ಲಿ ತಂಗುವುದಕ್ಕೆ ಬೇಕಾದ ಏರ್ಪಾಡೆಲ್ಲವನ್ನೂ ಅಣಿಮಾಡಿದ್ದನು. ಬೆಂಕಿಯಲ್ಲಿ ಗಡ್ಡೆಗೆಣಸುಗಳನ್ನು ಬೇಯಿಸಿ ಊಟಕ್ಕೆ ಕುಳಿತೆವು. ನಮ್ಮ ಮುಂದೆ ತಿಂಡಿ ತೀರ್ಥಗಳನ್ನು ಹರವಿಕೊಂಡಾಗ ಅದನ್ನು ನೋಡುವುದಕ್ಕೇ ಆನಂದವಾಗುತ್ತಿತ್ತು. ಅದುವರೆಗೆ ದಿನಗಟ್ಟಲೆ ತೆಂಗಿನಕಾಯಿ, ಮೀನು ಇಷ್ಟು ಮಾತ್ರ ತಿಂದುಕೊಂಡಿದ್ದವರಿಗೆ ಈ ದಿವಸ ದೊಡ್ಡ ಹಬ್ಬದ ಅಡಿಗೆಮಾಡಿ ಬಡಿಸಿದಂತೆಯೇ ಆಯಿತು. ಟಾರೋ, ಆಲೂಗಡ್ಡೆ, ಗೆಣಸು—ಜೊತೆಗೆ ಹಣ್ಣುಗಳು—ನಾವು ಹಡಗಿನಲ್ಲಿದ್ದಾಗ ಸಹಿತ ಇಷ್ಟು ರುಚಿಯಾದ ಮತ್ತು ಆರೋಗ್ಯಕರವಾದ ಆಹಾರ ಸಿಕ್ಕುತ್ತಿರಲಿಲ್ಲ.

ಪೀಟರ್ ಬಹಳ ಆನಂದದಿಂದ "ನೋಡು, ಜಾಕಿ, ನಾವೇನಾದರೂ ಈ ದ್ವೀಪದಲ್ಲಿ ಹೆಚ್ಚುಕಾಲ ನಿಂತರೆ ಊಟದ ವಿಷಯದಲ್ಲಿ ಬಹಳ ನಾಜೂಕು ಬಂದುಹೋಗುತ್ತದೆ. ಹಂದಿಯ ಹಾಗೆ ತಿನ್ನುವ ಅಭ್ಯಾಸವೂ ಬಂದುಬಿಡುತ್ತೆ" ಎಂದನು.

"ನಿನಗೇನೂ ಅಭ್ಯಾಸ ಬೇಕಿಲ್ಲ ಬಿಡು, ಪೀಟರ್. ನೀನು ಹಂದಿಯ ಹಾಗಾಗುವುದಕ್ಕೆ ಅಭ್ಯಾಸ ಬೇರೆ ಬೇಕೆ?" ಎಂದು ಜಾಕಿ ಹಾಸ್ಯಮಾಡಿದನು.

ಕಂಠಪೂರ್ತಿ ಊಟಮಾಡಿದಮೇಲೆ ಒಂದು ಬಂಡೆಯ ಆಶ್ರಯ

ದಲ್ಲಿ ಎಲೆಗಳನ್ನು ಹಾಸಿಕೊಂಡು ಎಲ್ಲರೂ ಮಲಗಿದೆವು. ದಿನವೆಲ್ಲಾ ನಡೆದು ಆಯಾಸವಾಗಿದ್ದುದರಿಂದ ಕಣ್ಣುಮುಚ್ಚುವುದೇ ತಡ, ಗಾಢ ನಿದ್ರೆ ಎಲ್ಲರನ್ನೂ ಆವರಿಸಿತು.

ಮಾರನೆಯ ದಿನ ಪ್ರಾತಃಕಾಲ ನಮಗೆ ಎಚ್ಚರವಾಗುವ ಹೊತ್ತಿಗೆ ಸೂರ್ಯನು ಅಂತರಿಕ್ಷದಲ್ಲಿ ಸ್ವಲ್ಪ ದೂರ ಪ್ರಯಾಣವನ್ನು ಸಾಗಿಸಿದ್ದನು. ರಾತ್ರಿಯ ಊಟ ಸ್ವಲ್ಪ ಬಲವಾದರೆ ಬೆಳಗ್ಗೆ ಹೊತ್ತಿಗೆ ಮುಂಚೆ ಏಳುವುದು ಕಷ್ಟವೆಂದು ತೋರುತ್ತದೆ. ಆದರೆ ನಮಗೆ ಯಾರಿಗೂ ಅಜೀರ್ಣವಾಗಲಿ ಆಲಸ್ಯವಾಗಲಿ ಕಾಣಲಿಲ್ಲ. ಬೆಳಗಿನ ಉಪಹಾರಕ್ಕೆ ಎಲ್ಲರೂ ಸಿದ್ಧರಾಗಿದ್ದೆವು. ಎಲ್ಲರೂ ನಮ್ಮ ಪದ್ಧತಿಯ ಪ್ರಕಾರ ಸಮುದ್ರ ಸ್ನಾನಮಾಡಿ ಸ್ವಲ್ಪ ತಿಂಡಿ ತಿಂದು ಮತ್ತೆ ಪ್ರಯಾಣ ಮಾಡಿದೆವು.

ಸುಮಾರು ಒಂದು ಮೈಲಿ ನಡೆದು ದ್ವೀಪದಲ್ಲಿನ ಒಂದು ತಿರುವನ್ನು ದಾಟಿದ ಮೇಲೆ ನಮ್ಮ ಮುಂದೆ ದಡದಿಂದ ಸ್ವಲ್ಪ ದೂರದಲ್ಲಿ ಒಂದೆರಡು ಸುಂದರವಾದ ದ್ವೀಪಗಳು ಕಾಣಿಸಿದವು. ಆ ಹೊತ್ತಿಗೆ ಸರಿಯಾಗಿ ಕೆಲವು ರಾತ್ರಿಗಳ ಹಿಂದೆ ನಮ್ಮನ್ನು ಹೆದರಿಸಿದ್ದ ಭಯಂಕರವಾದ ಕೂಗು ಮತ್ತೆ ಕೇಳಿ ಬಂತು. ಎಲ್ಲರೂ ನಿಂತಲ್ಲಿಯೇ ನಿಂತೆವು. ಆದರೆ ಈ ದಿನ ಹಿಂದಿನಂತೆ ನಾವು ಹೆದರಿಕೊಳ್ಳಲಿಲ್ಲ. ಅಂದು ಆ ಸದ್ದು ಕೇಳಿಬಂದಾಗ ರಾತ್ರಿ; ಕತ್ತಲೆಯ ಕಾಲ. ಈಗ ಹಾಡು ಹಗಲು. ಅದೇನು ಕಾರಣವೋ ತಿಳಿಯದು, ಎಂಥ ಪುಕ್ಕಲು ಮನುಷ್ಯನಾದರೂ ರಾತ್ರಿ ಹೆದರುವಂತೆ ಹಗಲಿನಲ್ಲಿ ಹೆದರುವುದಿಲ್ಲ. ಆ ವಿಚಿತ್ರವಾದ ಸದ್ದು ಕೇಳಿದೊಡನೆಯೇ ಪೀಟರ್ ತನ್ನ ಈಟಿಯನ್ನು ಎತ್ತಿ ಜಾಕಿಯ ಕಡೆಗೆ ತಿರುಗಿದನು.

“ ಅದೇನಿರಬಹುದು, ಜಾಕಿ ? ಈ ಸದ್ದು ಮೊದಲು ಕೇಳಿ ಒಂದು ವಾರವಾಗುತ್ತ ಬಂತು. ಅಂದಿನಿಂದ ಇದುವರೆಗೆ ಆ ಕೂಗು ಯಾವ ಪ್ರಾಣಿಯದಿರಬಹುದೋ, ಅದರಿಂದ ನಮಗೇನು ಅಪಾಯ ಬಂದೀತೋ ಎಂಬ ಅಳುಕು ನಮ್ಮನ್ನು ಬಾಧಿಸುತ್ತಲೇ ಇದೆ. ಈ ದ್ವೀಪದಲ್ಲಿ ಹಣ್ಣು ಹಂಪಲು, ಗೆಡ್ಡೆ ಗೆಣಸು ಎಲ್ಲಾ ಸಿಕ್ಕುತ್ತವೆ, ಬಹಳ ಸುಂದರ

ವಾಗಿದೆ, ಎಲ್ಲಾ ನಿಜ. ಆದರೆ ಹೀಗೆ ಭಯದಲ್ಲಿ ಜೀವಿಸುವುದಕ್ಕಿಂತ ಈ ಸ್ಥಳವನ್ನು ಬಿಟ್ಟು ಕಾಲು ಕೀಳುವುದೇ ಒಳ್ಳೆಯದು."

ಪೀಟರಿನ ಮಾತು ಮುಗಿಯುವ ಹೊತ್ತಿಗೆ ಮತ್ತೊಂದು ಸಾರಿ ಹಿಂದಿಗಿಂತಲೂ ಗಟ್ಟಿಯಾಗಿ ಆ ಕೂಗು ಕೇಳಿತು.

"ಆ ದ್ವೀಪಗಳ ಕಡೆಯಿಂದ ಬಂದ ಹಾಗಿದೆ."

"ಯಾವ ಮನುಷ್ಯನೂ ಪ್ರಾಣಿಯೂ ಹೀಗೆ ಕೂಗಿದ್ದನ್ನು ನಾನು ಖಂಡಿತ ಕೇಳಿಲ್ಲ. ಅದೆಲ್ಲೋ ಪಿಶಾಚಿಯೇ ಇರಬೇಕು"

ಎಲ್ಲರೂ ಆ ದ್ವೀಪಗಳ ಕಡೆಯೇ ದೃಷ್ಟಿಯನ್ನು ನೆಟ್ಟು ನೋಡಿದೆವು. ದೊಡ್ಡದಾದ ದ್ವೀಪವೊಂದರ ತೀರ ಪ್ರದೇಶದಲ್ಲಿ ಮರಳಿನ ಮೇಲೆ ಯಾವುದೋ ವಿಚಿತ್ರ ಪ್ರಾಣಿಗಳು ಓಡಾಡುತ್ತಿರುವಂತೆ ಕಂಡಿತು.

ಪೀಟರ್ ಅದನ್ನು ನೋಡಿ ಬಹಳ ಆಶ್ಚರ್ಯದಿಂದ, "ಅಲ್ಲಿ ಸಿಪಾಯಿಗಳು ಕವಾತು ಮಾಡುತ್ತಿರಬೇಕು, ರೋವರ್. ನೋಡು ಹಾಗೇ ಕಾಣುವುದಿಲ್ಲವೆ?" ಎಂದನು. ನನಗೂ ಪೀಟರ್ ಹೇಳಿದ್ದು ನಿಜವೆಂದು ತೋರಿತು. ನಾವು ನಿಂತಿದ್ದ ಸ್ಥಳದಿಂದ ನೋಡಿದರೆ ಆ ದೂರದ ದ್ವೀಪದಲ್ಲಿ ಒಂದು ಸಣ್ಣ ಸೈನ್ಯವೇ ಇದ್ದಂತೆ ತೋರಿತು. ನೀಲಿಯ ಅಂಗಿ, ಬಿಳಿಯ ಷರಾಯಿ ಧರಿಸಿಕೊಂಡು ಅವರೆಲ್ಲರೂ ಸಾಲು ಸಾಲಾಗಿ ವ್ಯೂಹ ಕಟ್ಟಿ ನಡೆಯುತ್ತಿದ್ದಂತೆ ತೋರಿತು. ನಾವು ಹಾಗೇ ಬೆಪ್ಪು ಹಿಡಿದಂತೆ ನೋಡುತ್ತಿದ್ದಾಗ ಆ ದಿಗಿಲುಗೊಳಿಸುವ ಸದ್ದು ಮತ್ತೆ ನೀರಿನ ಮೇಲಿನಿಂದ ತೇಲಿ ಬಂತು. ಪೀಟರ್ ನಮ್ಮ ಕಡೆ ತಿರುಗಿ ಹೇಳಿದ; "ಜಾಕಿ, ಆ ದ್ವೀಪದ ಕಾಡುಜನರನ್ನೆಲ್ಲಾ ನಿರ್ಮೂಲ ಮಾಡುವುದಕ್ಕೆ ಯಾರೋ ಸೈನ್ಯ ಕಳುಹಿಸಿರಬೇಕು."

"ಹಾಗಲ್ಲ, ಪೀಟರ್. ಈಗ ನನಗೆ ಗೊತ್ತಾಯಿತು. ಅವು ಪೆಂಗ್ವಿನ್ನುಗಳು"

"ಪೆಂಗ್ವಿನ್ನುಗಳೆ?"

"ಹೌದು. ಪೆಂಗ್ವಿನ್ನುಗಳು. ಪಿಶಾಚಿಯೂ ಅಲ್ಲ, ಸೈನ್ಯವೂ ಅಲ್ಲ. ಪೆಂಗ್ವಿನ್ ಅಂದರೆ ಒಂದು ಜಾತಿಯ ಸಮುದ್ರದ ಹಕ್ಕಿ. ದೋಣಿ ತಯಾರು ಮಾಡುವುದಕ್ಕಾದರೆ ಮುಂದೆ ಯಾವಾಗಲಾದರೂ ನಾವು ಆ

ದ್ವೀಪಕ್ಕೆ ಹೋಗಿ ನೋಡಿಕೊಂಡು ಬರಬಹುದು."

"ಅಯ್ಯೋ ಇಷ್ಟೇನೆ! ಹಾಗಾದರೆ ಈ ಪೆಸಿಫಿಕ್ ಸಾಗರ ಏನೂ ಪ್ರಯೋಜನವಿಲ್ಲ. ಇಲ್ಲಿಯ ದ್ವೀಪಗಳಲ್ಲಿ ವಿಕಾರವಾಗಿ ಅರಚುವಂಥ ಒಂದು ಪಿಶಾಚಿ ಗತಿಯಿಲ್ಲ. ನಾಲ್ಕು ಜನರನ್ನು ಕೊಂದು ಹಾಕುವಂಥ ಸಿಪಾಯಿಗಳು ಗತಿಯಿಲ್ಲ. ಬರೀ ಪೆಂಗ್ವಿನ್ನುಗಳು, ಸಮುದ್ರದ ಹಕ್ಕಿಗಳು! ಹೋಗಲಿ ಬಿಡು. ಕೆಲಸಕ್ಕೆ ಬಾರದ ಈ ಹಕ್ಕಿಗಳ ಮುಖ ನೋಡುವುದಕ್ಕೆ ಬದಲಾಗಿ ನಮ್ಮ ಪ್ರಯಾಣವನ್ನಾದರೂ ಮುಂದು ವರಿಸೋಣ."

ಆ ಹಕ್ಕಿಗಳ ವಿಷಯ ಜಾಕಿಗೆ ಸಹ ಹೆಚ್ಚು ತಿಳಿದಿರಲಿಲ್ಲ. ನನಗೇನೋ ಎಂದಾದರೂ ಒಂದು ದಿನ ಆ ದ್ವೀಪಕ್ಕೆ ಹೋಗಿ ಅವುಗಳನ್ನು ಹತ್ತಿರದಿಂದ ನೋಡಬೇಕೆಂಬ ಅಪೇಕ್ಷೆಯಿತ್ತು. ಆದರೆ ನಮ್ಮಲ್ಲಿ ದೋಣಿಯಿಲ್ಲದೆ ಇದ್ದುದರಿಂದ ಸದ್ಯಕ್ಕೆ ಅಲ್ಲಿಗೆ ಹೋಗುವುದು ಸಾಧ್ಯವಿರಲಿಲ್ಲ.

ಮೂರನೆಯ ದಿನ ನಮ್ಮ ಪ್ರಯಾಣ ಹೆಚ್ಚು ವಿಶೇಷವೇನೂ ಇಲ್ಲದೆ ಮೊದಲಿನಂತೆಯೇ ಸಾಗಿತು.

ಆ ದಿನವೆಲ್ಲಾ ನಡೆದು ಸಂಜೆಯ ವೇಳೆಗೆ ದ್ವೀಪದ ಪ್ರದಕ್ಷಿಣೆಯನ್ನು ಪೂರ್ತಿಮಾಡಿ ಮತ್ತೆ ನಮ್ಮ ಗುಡಿಸಲನ್ನು ತಲಪಿದೆವು. ನಾವು ಬಿಟ್ಟಿದ್ದ ಸಾಮಾನುಗಳೆಲ್ಲಾ ಇದ್ದ ಕಡೆಯೇ ಇದ್ದುವು. ನಾವು ಮೂವರೂ ದಣಿದಿದ್ದುದರಿಂದ ಇನ್ನೂ ಸೂರ್ಯ ಮುಳುಗುವ ಸಮಯವಾದರೂ ಕೂಡಲೇ ಊಟಮಾಡಿ ಮಲಗಿದೆವು. ಯಾವಾಗ ನಿದ್ದೆ ಬಂದಿತೋ ನಮಗೇ ತಿಳಿಯದು. ನಮಗೆ ಎಚ್ಚರವಾದಾಗ ಮತ್ತೆ ಸೂರ್ಯ ಮುಳುಗುವ ಸಮಯವಾಗಿತ್ತು. ಅಂದರೆ ನಾವು ಇಪ್ಪತ್ತು ನಾಲ್ಕು ಘಂಟೆಯ ಕಾಲ ಒಂದೇ ಸಮ ನಿದ್ರೆ ಮಾಡಿರಬೇಕು.

೭

# ವಜ್ರದ ಗುಹೆ

ನಾವು ದ್ವೀಪವನ್ನು ಸುತ್ತುಗಟ್ಟಿ ಸುಮಾರು ಮೂರು ವಾರವಾಗಿತ್ತು. ಅಷ್ಟು ದಿನವೂ ಹೆಚ್ಚು ಕೆಲಸವಿಲ್ಲದೆ ಸೋಮಾರಿಗಳಾಗಿ ಕಾಲ ಕಳೆದಿದ್ದುದರಿಂದ ಪೀಟರಿಗೆ ಸ್ವಲ್ಪ ಬೇಸರವಾಗಿತ್ತು.

"ಜಾಕಿ, ಇಲ್ಲೇ ಸುಮ್ಮನೆ ಕುಳಿತು ಬೇಸರವಾಗಿದೆ. ಏನಾದರೂ ಓಡಾಡುವಂಥ ಕೆಲಸ ಮಾಡೋಣ. ಬೆಟ್ಟ ಹತ್ತುವುದೋ, ಹಕ್ಕಿಗಳ ಬೇಟೆಯಾಡುವುದೋ ಏನಾದರೂ ಸರಿಯೆ, ಮೈಯನ್ನೆತ್ತಿ ಒಗೆಯುವಂಥ ಕೆಲಸವಾಗಬೇಕು."

"ಮೈ ಎತ್ತಿ ಹಾಕಬೇಕೆ? ಹಾಗಾದರೆ ಆ ಬುಗ್ಗೆ ಬಂಡೆಯ ಮೇಲೆ ಹೋಗಿ ನಿಂತುಕೊ. ಹಿಂದೆ ಅಲ್ಲಿಗೆ ಹೋಗಿದ್ದಾಗ ನಿನ್ನನ್ನು ಚೆನ್ನಾಗಿ ಎತ್ತಿ ಹಾಕಿತಲ್ಲವೆ? ಈ ಸಾರಿ ಇನ್ನಷ್ಟು ಮೇಲಕ್ಕೆ ಒಗೆಯಬಹುದು."

"ಜಾಕಿ, ಎಷ್ಟು ವಯಸ್ಸಾದರೂ ನೀನು ಹುಡುಗತನದ ಕುಚೋದ್ಯ ಬಿಡಲಿಲ್ಲ. ನಿನ್ನ ನಡತೆ ಸ್ವಲ್ಪವೂ ಸಮರ್ಪಕವಾಗಿಲ್ಲ. ನೀನು ಸ್ವಲ್ಪ ಬುದ್ಧಿವಂತನಾಗದೆ ಹೋದರೆ ನಾನು ನಿನ್ನ ಸಂಗ ಬಿಟ್ಟು ಬಿಡ ಬೇಕಾಗುತ್ತೆ."

ಅವರಿಬ್ಬರೂ ಮಾತಾಡುತ್ತಿದ್ದಾಗ ನನಗೆ ಇನ್ನೊಂದು ವಿಷಯ ನೆನಪಿಗೆ ಬಂತು.

"ಜಾಕಿ, ಆ ಬಂಡೆಗಳ ಬಳಿ ನೀರಿನಲ್ಲಿ ಹಸುರಿನ ಪದಾರ್ಥ ನೋಡಿದೆವಲ್ಲ, ಅದೇನು ಅಂತ ತಿಳಿದುಕೊಳ್ಳಬೇಡವೆ? ಇವೊತ್ತು ಅಲ್ಲಿಗೇ ಏತಕ್ಕೆ ಹೋಗಬಾರದು?"

ಬುಗ್ಗೆಯ ಬಂಡೆಗಳು ನಮ್ಮ ಗುಡಿಸಲಿಗೆ ಹತ್ತಿರವಾಗಿಯೇ ಇದ್ದುದರಿಂದ ಬೇಗಲೇ ಆ ಸ್ಥಳವನ್ನು ತಲಪಿದೆವು. ಮತ್ತೆ ಆ ಬಂಡೆಯ ತುದಿಯಲ್ಲಿ ನಿಂತು ಬಗ್ಗಿ ನೋಡಿದರೆ ಆ ಎಳೆ ಹಸುರು ಬಣ್ಣದ ವಸ್ತು ತನ್ನ ಬಾಲವನ್ನು ಹಿಂದಕ್ಕೂ ಮುಂದಕ್ಕೂ ಅಲುಗಾಡಿಸುತ್ತಾ

ಮೊದಲಿದ್ದ ಸ್ಥಳದಲ್ಲೇ ಈಗಲೂ ಕಾಣಿಸಿತು.

" ಇದೇನಿರಬಹುದೋ ಗೊತ್ತಾಗುವುದಿಲ್ಲವಲ್ಲ ! "

" ಇಂಥಾದ್ದನ್ನು ಹಿಂದೆ ಎಲ್ಲಿಯೂ ಕಂಡಿರಲಿಲ್ಲ. "

ಪೀಟರ್ ತನ್ನ ಈಟಿಯನ್ನು ಎತ್ತಿಕೊಂಡು ಬಂದ.

" ಜಾಕಿ, ಆವೊತ್ತು ನೀನು ಅದನ್ನು ಇರಿಯುವುದಕ್ಕೆ ಹೋಗಿ ಗುರಿಯಿಡುವುದಕ್ಕೆ ಬರದೆ ಪೆಚ್ಚು ಕೆಲಸ ಮಾಡಿದೆ. ಈಗ ದಾರಿ ಬಿಡು. ಆ ಪ್ರಾಣಿಗೆ ಜೀವವೇನಾದರೂ ಇದ್ದರೆ ಆ ಜೀವ ತೆಗೆದುಬಿಡುತ್ತೇನೆ. "

ಪೀಟರ್ ಈಟಿಯನ್ನು ಎತ್ತಿ ನಿಧಾನವಾಗಿ ಗುರಿಯಿಟ್ಟು ಬಲ ವಾಗಿ ಬಾಣ ಬಿಡುವಂತೆ ಅದನ್ನು ಆ ವಸ್ತುವಿನ ಮಧ್ಯಕ್ಕೆ ಸರಿಯಾಗಿ ಹೊಡೆದನು. ಗುರಿಯೇನೋ ತಪ್ಪಲಿಲ್ಲ. ಅದನ್ನು ಸೀಳಿಕೊಂಡು ಹೋಗಿ ಈಟಿ ಮತ್ತೆ ಮೇಲಕ್ಕೆ ಬಂತು. ಅದರ ಅಲಗಿನ ಮೇಲೆ ರಕ್ತದ ಗುರುತೇನೂ ಇಲ್ಲದೆ ಶುಭ್ರವಾಗಿತ್ತು. ನೀರಿನಲ್ಲಿದ್ದ ವಸ್ತು ಮೊದಲಿನಂತೆ ನಿಶ್ಚಿಂತೆಯಾಗಿ ತನ್ನ ಬಾಲವನ್ನಾಡಿಸುತ್ತ ಸುಖವಾಗಿತ್ತು.

" ಅದು ಪ್ರಾಣಿಯಲ್ಲ ; ರಂಜಕದ ಬೆಳಕಿನ ಹಾಗೆ ಇದೂ ಒಂದು ವಿಧವಾದ ಬೆಳಕಿರಬೇಕೆಂದು ನನಗೇನೋ ದೃಢವಾಗಿದೆ. ಆದರೆ ಆ ಸ್ಥಳವನ್ನು ಬಿಟ್ಟು ಸ್ವಲ್ಪವೂ ಕದಲದೆ ಇರುವುದೇ ನನಗೆ ಆಶ್ಚರ್ಯ " ಎಂದು ಜಾಕಿ ಹೇಳಿದ. ನನಗೂ ಅದು ವಿಚಿತ್ರವಾಗಿಯೇ ಕಂಡಿತು. ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ರಾತ್ರಿಯ ಹೊತ್ತಿನಲ್ಲಿ ರಂಜಕ ದಂಥ ಬೆಳಕನ್ನು ನಾನು ಅನೇಕ ವೇಳೆ ನೋಡಿದ್ದೆ. ಇದೂ ಅಂಥ ಬೆಳಕೇ ಇರಬೇಕೆಂದು ತೋರಿತು.

" ಇಷ್ಟೆಲ್ಲಾ ಸಂದೇಹವೇಕೆ, ಜಾಕಿ ? ಅದು ಷಾರ್ಕ್ ಅಲ್ಲವೆಂದು ಧೈರ್ಯವಾಯಿತಲ್ಲ, ಈಗ ಮುಳುಗಿ ಪರೀಕ್ಷೆ ಮಾಡಿಬಿಟ್ಟರೆ ಅದರ ವಿಷಯ ಗೊತ್ತಾಗಿಯೇ ಆಗುತ್ತೆ. "

ಜಾಕಿ ನನ್ನ ಮಾತಿಗೆ ಒಪ್ಪಿದ. " ನಿಜ. ನಾನೇ ಹೋಗಿ ನೋಡುತ್ತೇನೆ. ನಿನಗೆ ನನ್ನಷ್ಟು ಚೆನ್ನಾಗಿ ಮುಳುಗುವುದಕ್ಕೆ ಬರುವು ದಿಲ್ಲ. ಪೀಟರ್, ದಾರಿ ಬಿಡು. "

ಅಂಗಿ ಷರಟುಗಳನ್ನು ತೆಗೆದು ಹಾಕಿ, ಕೈಗಳೆರಡನ್ನೂ ಎತ್ತಿ

ಜೋಡಿಸಿಕೊಂಡು ಜಾಕಿ ನೀರಿನಲ್ಲಿ ಮುಳುಗಿದ. ಅವನು ಬಿದ್ದೊಡನೆ ನೀರು ಮೇಲಕ್ಕೆ ಹಾರಿ ಒಂದೆರಡು ಕ್ಷಣ ಅವನನ್ನು ನಮ್ಮ ದೃಷ್ಟಿಯಿಂದ ಮರೆಮಾಡಿ ಅನಂತರ ಮತ್ತೆ ತಿಳಿಯಾಯಿತು ಜಾಕಿ ಆ ಹಸುರು ಬೆಳಕಿನ ಮಧ್ಯದಲ್ಲಿ ಈಜುತ್ತಿದ್ದುದನ್ನು ನೋಡಿದೆವು ಒಂದ ನಿಮಿಷವಾಗುವುದರೊಳಗೆ ಅವನು ಅದರ ಕೆಳಗೆ ಮುಳುಗಿ ಇದ್ದಕ್ಕಿದ್ದ ಹಾಗೆಯೇ ಅದೃಶ್ಯನಾದನು. "ಅವನು ಮುಳುಗಿರಬೇಕು ಇನ್ನೇನು ಒಂದು ನಿಮಿಷದಲ್ಲಿ ಉಸಿರು ತೆಗೆದುಕೊಳ್ಳುವುದಕ್ಕಾದರೂ ಮತ್ತೆ ಏಳುತ್ತಾನೆ" ಎಂದುಕೊಂಡು ನಾವು ಅಲ್ಲಿಯೇ ನೋಡುತ್ತ ನಿಂತಿದ್ದೆವು ಒಂದು ನಿಮಿಷ ಕಳೆಯಿತು. ಆದರೆ ಜಾಕಿ ಬರಲಿಲ್ಲ. ಎರಡು ನಿಮಿಷ ಕಳೆಯಿತು ನನ್ನ ಮನಸ್ಸಿನಲ್ಲಿ ಭಯ ಹುಟ್ಟಿತು. ನನಗೆ ತಿಳಿದ ಮಟ್ಟಿಗೆ ಯಾವ ದಿನವೂ ಅವನು ಒಂದು ನಿಮಿಷಕ್ಕಿಂತ ಹೆಚ್ಚು ಕಾಲ ಮುಳುಗಿದ್ದವನಲ್ಲ, ಅಷ್ಟು ಕಾಲ ಇದ್ದದ್ದು ಸಹ ಅಪರೂಪ

"ಪೀಟರ್! ಏನೋ ಆಗಿ ಹೋಗಿದೆ. ಜಾಕಿ ಮುಳುಗಿ ಮೂರು ನಿಮಿಷದ ಮೇಲಾಯಿತು."

ಪೀಟರ್ ಉತ್ತರ ಕೊಡದೆ ನಿಶ್ಚಲನಾಗಿ ಜಾಕಿ ಮುಳುಗಿದ ಸ್ಥಳವನ್ನೇ ದಿಟ್ಟಿಸಿ ನೋಡುತ್ತಿದ್ದನು. ಭಯದಿಂದ ಅವನ ಮುಖದಲ್ಲಿ ರಕ್ತವೇ ಚಲಿಸದೆ ಬಿಳಿಚಿಕೊಂಡು ಹೋಗಿದ್ದನು. ಒಂದು ನಿಮಿಷ ಹಾಗೆಯೇ ನಿಂತಿದ್ದವನು ಇದ್ದಕ್ಕಿದ್ದ ಹಾಗೆಯೇ ಮೇಲಕ್ಕೆ ನೆಗೆದು, "ಜಾಕಿ! ಅಯ್ಯೋ, ನಮ್ಮ ಜಾಕಿ ಸತ್ತು ಹೋಗಿರಬೇಕು ಅದು ಎಲ್ಲೋ ಷಾರ್ಕೇ ಆಗಿದ್ದಿರಬೇಕು ಜಾಕಿ ಮತ್ತೆ ನಮ್ಮ ಕಣ್ಣಿಗೆ ಕಾಣಿಸುವ ಹಾಗಿಲ್ಲ!"

ಸ್ವಲ್ಪ ಹೊತ್ತು ನಾನೇನು ಮಾಡುತ್ತಿದ್ದೆನೋ ನನಗೇ ತಿಳಿಯದು. ಹೃದಯದ ಮೇಲೆ ಕೊಚ್ಚಿ ಹರಿಯುತ್ತಿದ್ದ ಭಯದಿಂದ ನನಗೆ ಪ್ರಜ್ಞೆ ತಪ್ಪಿದ ಹಾಗಾಗಿತ್ತು. ಪೀಟರ್ ನನ್ನ ಅಂಗಿಯನ್ನು ಹಿಡಿದೆಳೆದು ಹುಚ್ಚನಂತೆ ನನ್ನನ್ನು ಕೂಗಿದಾಗಲೇ ನನಗೆ ಮತ್ತೆ ಅರಿವು ಬಂದದ್ದು.

"ರೋವರ್, ರೋವರ್, ಜಾಕಿ ಇನ್ನೂ ಬದುಕಿದ್ದರೂ ಇರಬಹುದು. ಬಹುಶಃ ಮೂರ್ಛೆ ಹೋಗಿದ್ದಾನೆಯೋ ಏನೊ, ಹೋಗು

ರೋವರ್, ಮುಳುಗಿ ನೋಡು!"

ಅದು ನನಗೆ ಮೊದಲೇ ಹೊಳೆಯದೆ ಇದ್ದದ್ದು ಆಶ್ಚರ್ಯ. ಪೀಟರ್ ಆ ಸಲಹೆ ಕೊಟ್ಟ ಕೂಡಲೆ ನಾನು ಬಟ್ಟೆಗಳನ್ನು ತೆಗೆದು ಹಾಕಿ ನೀರಿಗೆ ಹಾರುವುದರಲ್ಲಿದ್ದೆ. ಆದರೆ ಅಷ್ಟರಲ್ಲೇ ಜಾಕಿ ಮೇಲ ಕ್ಕೇಳುವುದು ಕಾಣಿಸಿತು. ನೀರಿನಿಂದ ಮೇಲೆ ಬಂದೊಡನೆಯೇ ಒಂದು ಕೂಗುಹಾಕಿ ಕೂದಲಿನಲ್ಲಿದ್ದ ನೀರನ್ನು ಒತ್ತಿ ತೆಗೆದನು. ಯಾವ ಅಪಾಯವೂ ಇಲ್ಲದೆ ಅವನು ಮೇಲಕ್ಕೆ ಬಂದದ್ದರಿಂದ ನಮಗೆ ಬಹಳ ಸಂತೋಷವೇನೋ ಆಯಿತು. ಆದರೆ ಸಂತೋಷಕ್ಕಿಂತಲೂ ಹೆಚ್ಚಾಗಿ ಅಷ್ಟೊಂದು ಕಾಲ ಉಸಿರಾಡದೆ ನೀರಿನಲ್ಲಿ ಹೇಗೆ ಬದುಕಿದ್ದ, ಎಂದು ಆಶ್ಚರ್ಯ. ನಮಗೆ ತಿಳಿದ ಮಟ್ಟಿಗೆ ಅವನು ಸುಮಾರು ಹತ್ತು ನಿಮಿಷ ನೀರಿನೊಳಗೇ ಮುಳುಗಿದ್ದನು. ಮನುಷ್ಯ ಮಾತ್ರನಾದವನು ಅಷ್ಟು ಹೊತ್ತು ನೀರಿನಲ್ಲಿ ಮುಳುಗಿದ್ದರೆ ಯಾವ ತೊಂದರೆಯೂ ಇಲ್ಲದೆ ಬದುಕಿ ಜ್ಞಾನದಿಂದಿರುವುದು ಅಸಾಧ್ಯ. ನಾನು ಆಶ್ಚರ್ಯದಿಂದ ಮೂಕನಾಗಿದ್ದೆ. ಆದರೆ ಪೀಟರ್ ಸುಮ್ಮನಿರಲಿಲ್ಲ. ಜಾಕಿ ದೀರ್ಘವಾಗಿ ಉಸಿರೆಳೆದು ಕೊಳ್ಳುತ್ತ ಮೇಲಕ್ಕೆ ಬಂದದ್ದೇ ತಡ, ಪೀಟರ್ ಒಂದೇ ನೆಗೆತಕ್ಕೆ ಅವನ ಬಳಿಗೆ ಹಾರಿ, ಅವನನ್ನು ಅಪ್ಪಿಕೊಂಡು ಗಳಗಳನೆ ಕಣ್ಣೀರು ಸುರಿಸಿ ದನು.

" ಜಾಕಿ, ಜಾಕಿ, ಇಷ್ಟು ಹೊತ್ತು ಏನು ಮಾಡುತ್ತಿದ್ದೆ? ಏತಕ್ಕೆ ಮೇಲೆ ಬರಲಿಲ್ಲ?"

" ಎಲ್ಲಾ ಹೇಳುತ್ತೇನೆ, ಪೀಟರ್, ಸ್ವಲ್ಪ ತಡೆದುಕೊ. ಆ ಹಸುರು ವಸ್ತು ಷಾರ್ಕ್ ಅಲ್ಲ. ಈ ಬಂಡೆಗಳ ಕೆಳಗೆ ಒಂದು ಗುಹೆ ಯಿದೆ. ಅದರಿಂದ ಒಂದು ಸಣ್ಣ ಬೆಳಕಿನ ಪ್ರವಾಹ ಹೊರಟು ನಮಗೆ ಹಾಗೆ ಕಾಣುತ್ತದೆ. ನಾನು ಮುಳುಗಿದೊಡನೆ ಆ ಬೆಳಕು ಬರುವ ಜಾಗವನ್ನು ನೋಡಿದೆ. ಅದು ಈಗ ನಾವು ಕೂತಿರುವ ಬಂಡೆಯ ಕೆಳಗೇ ಇದೆ. ಅದರ ಬಳಿಗೆ ಹೋಗಿ ನೋಡಿದಾಗ ಒಳಗೆ ಬೆಳಕಾಗಿ ರುವ ಪ್ರದೇಶವಿರುವ ಹಾಗೆ ಕಂಡಿತು. ಅದರೊಳಕ್ಕೆ ಹೋಗಲೇ, ಬೇಡವೇ ಎಂಬ ಸಂದೇಹವಾಯಿತು, ಒಂದೆರಡು ಕ್ಷಣ. ಆಮೇಲೆ

ಅಲ್ಲಿ ಏನಿದೆಯೋ ನೋಡಿಯೇ ತೀರಬೇಕೆಂದು ನಿಶ್ಚಯಿಸಿ ಒಳಕ್ಕೆ ನುಗ್ಗಿದೆ. ಇದನ್ನೆಲ್ಲಾ ನಾನು ಬಾಯಲ್ಲಿ ಹೇಳುವುದಕ್ಕೆ ಹೊತ್ತು ಹಿಡಿಯುತ್ತದೆ. ಆದರೆ ಆಗ ನನ್ನ ಮನಸ್ಸಿನಲ್ಲಿ ಈ ಯೋಚನೆಗಳೆಲ್ಲಾ ಒಂದೇ ಕ್ಷಣದಲ್ಲಿ ಹಾದು ಹೋದವು. ಅಲ್ಲಿಗೆ ಹೋಗಿ ಮತ್ತೆ ನೀರಿನಿಂದ ಮೇಲಕ್ಕೇಳುವವರೆಗೆ ಉಸಿರು ಹಿಡಿಯಬಹುದೆಂದು ತೋರಿತು. ಆದರೂ ಒಂದೆರಡು ಅಡಿ ಒಳಕ್ಕೆ ಹೋದೊಡನೆಯೇ 'ಮತ್ತೆ ಹಿಂದಿರುಗುವುದು ಒಳ್ಳೆಯದು, ಈ ವಿಚಿತ್ರ ಸ್ಥಳದಲ್ಲಿ ಹೆಚ್ಚು ಹೊತ್ತು ಇರಬಾರದು' ಎಂದುಕೊಂಡು ಕತ್ತೆತ್ತಿ ನೋಡಿದೆ. ನೀರಿನ ಮೇಲೆ ಸ್ವಲ್ಪ ಬೆಳಕು ಇದ್ದ ಹಾಗೆ ಕಾಣಿಸಿತು. ಸ್ವಲ್ಪ ಮೇಲಕ್ಕೆ ಈಜಿದೆ. ತಲೆ ನೀರಿನಿಂದ ಮೇಲಕ್ಕೆ ಬಂತು. ಬೇಕಾದಷ್ಟು ಉಸಿರು ತೆಗೆದುಕೊಂಡು ಬಂದ ದಾರಿಯಲ್ಲಿ ಹಿಂತಿರುಗಿ ಹೋಗಬಹುದೆಂದು ಮನಸ್ಸೂ ಬಹಳ ಹಗುರ ವಾಯಿತು. ಮತ್ತೆ ಹೊರಗೆ ಹೋಗುವ ದಾರಿಯನ್ನು ಎಲ್ಲಿ ತಪ್ಪುವೆನೋ ಎಂಬ ಯೋಚನೆಯೂ ಬಂತು. ಆದರೆ ಕೆಳಗಡೆಗೆ ತಿರುಗಿ ನೋಡಿದಾಗ ಆ ಹಸುರು ಬೆಳಕು ಹೊರಗೆ ಹೇಗೆ ಕಾಣುತ್ತಿತ್ತೋ ಹಾಗೇ ಗುಹೆಯ ಒಳಗೂ ಕಾಣುತ್ತಿತ್ತು. ಹೊರಗಿಗಿಂತ ಒಳಗೆ ಇನ್ನೂ ಹೆಚ್ಚು ಪ್ರಕಾಶ ದಿಂದಲೇ ಕಾಣಿಸಿತು. ಇನ್ನು ಮನಸ್ಸಿಗೆ ಯಾವ ಆತಂಕವೂ ಉಳಿಯಲಿಲ್ಲ.

"ಗುಹೆಯಲ್ಲಿ ಮೊದಲು ಏನೂ ಕಾಣದಷ್ಟು ಕತ್ತಲೆಯಾಗಿತ್ತು. ಆದರೆ ಒಂದು ನಿಮಿಷ ಕಳೆಯುವುದರಲ್ಲಿ ನನ್ನ ಕಣ್ಣುಗಳಿಗೂ ಆ ಮಬ್ಬಿ ಗೂ ಹೊಂದಿಕೆಯಾಯಿತು. ನಾನಿದ್ದುದು ಒಂದು ವಿಶಾಲವಾದ ಗುಹೆ ಯಲ್ಲಿ. ಅದರ ಗೋಡೆಗಳು ಎರಡು ಕಡೆಯಲ್ಲೂ ಕಾಣುತ್ತಿದ್ದವು. ತಲೆಯ ಮೇಲೆ ಕಾಣುತ್ತಿದ್ದ ಛಾವಣಿಯ ಬಳಿ ಥಳ ಥಳನೆ ಹೊಳೆ ಯುವ ವಸ್ತುಗಳು ಏನೋ ಇದ್ದಂತೆ ತೋರಿತು. ಆಶ್ಚರ್ಯದಿಂದ ಸುತ್ತ ಮುತ್ತ ನೋಡಿದೆ. ಅಷ್ಟರಲ್ಲೇ ನಿಮ್ಮಿಬ್ಬರ ನೆನಪು ಬಂತು. ನಾನು ಸತ್ತು ಹೋಗಿದ್ದೇನೆಂದು ನೀವು ಹೆದರಿರಬಹುದು ಎಂದುಕೊಂಡು, ಮತ್ತೆ ಮುಳುಗಿ ಬಂದ ದಾರಿಯಲ್ಲೇ ಬೇಗ ಹಿಂದಿರುಗಿದೆ."

ಜಾಕಿಯ ಕಥೆಯನ್ನು ಕೇಳಿದ ಮೇಲೆ ನಾನೂ ಆ ಗುಹೆಯನ್ನು

ನೋಡುವ ತನಕ ಮನಸ್ಸಿಗೆ ಸಮಾಧಾನವಿಲ್ಲ. ಕೂಡಲೆ ಮುಳುಗಿ ಅಲ್ಲಿಗೆ ಹೋದೆ. ಆದರೆ ಅಲ್ಲಿಯ ಕತ್ತಲೆಯಲ್ಲಿ ಹೆಚ್ಚಾಗಿ ಏನೂ ಕಾಣ ಲಿಲ್ಲ. ಮತ್ತೆ ಮೇಲಕ್ಕೆ ಬಂದ ಮೇಲೆ ನಾನೂ ಜಾಕಿಯೂ ಅದೇ ವಿಷಯ ಮಾತಾಡುತ್ತಿದ್ದೆವು. ಪೀಟರ್ ಮಾತ್ರ ಮುಖದಲ್ಲಿ ಅಸಮಾ ಧಾನವನ್ನು ಸೂಚಿಸುತ್ತ ಸ್ವಲ್ಪ ದೂರದಲ್ಲಿ ಕುಳಿತಿದ್ದನು.

"ಏನೋ, ಪೀಟರ್, ಸಪ್ಪೆ ಮುಖ ಹಾಕಿಕೊಂಡಿದೀಯೆ?" ಎಂದೆ.

"ಸಪ್ಪೆ ಮುಖವಲ್ಲದೆ ಮತ್ತೇನು! ನೀವು ಸಮುದ್ರದಲ್ಲಿ ಮುಳುಗಿ ಓಡಾಡುವುದನ್ನು ನೋಡಿದರೆ ನೀವೇನು ಮನುಷ್ಯರೋ ಮೀನುಗಳೋ ಅಂತ ಸಂದೇಹ ಬರುತ್ತೆ. ಇಬ್ಬರೂ ಆ ಗುಹೆ ನೋಡಿಕೊಂಡು ಬಂದು ಬಿಟ್ಟದೀರಿ; ಈಗ ಹರಟೆ ಹೊಡೆಯುತ್ತಾ ಇದೀರಿ. ಅದನ್ನು ನೋಡದೆ ಇರುವವನು ನಾನೇನು ಮಾಡಬೇಕು! ಆಗಲಿ, ಮಾತು ನಡಿಯಲಿ, ಹುಚ್ಚು ಹಿಡಿದ ಮೀನುಗಳಾದರೂ ವಾಸಿ, ನಿಮಗಿಂತ! ನನಗೆ ಹೊಟ್ಟೆ ಉರಿಯುತ್ತೆ ನಿಮ್ಮ ಮಾತು ಕೇಳಿದರೆ!"

ಜಾಕಿ ಅವನನ್ನು ಸಮಾಧಾನ ಪಡಿಸುವುದಕ್ಕೆ ಹೋದ.

"ಪೀಟರ್, ನಾವೇನು ಮಾಡೋಣ ಹೇಳು. ನೀನೂ ಅಲ್ಲಿಗೆ ಬರುವುದಾದರೆ ಕರೆದುಕೊಂಡು ಹೋಗುವುದಕ್ಕೆ ನಾನು ಸಿದ್ಧ. ನೀನೂ ಮುಳುಗುವುದನ್ನು ಕಲಿತುಕೊಂಡರೆ . . ."

"ಹೌದು. ನಾಳೆ ಹಾರುವುದನ್ನು ಕಲಿತುಕೋ ಅನ್ನು!"

ಪೀಟರಿನ ಅಸಮಾಧಾನ ಕಡಿಮೆಯಾಗಲಿಲ್ಲ, ನಮಗೆ ನಗು ಬಂತು. ಪೀಟರಿಗೆ ನೀರನ್ನು ಕಂಡರೆ ನಡುಕ. ಅವನನ್ನು ಕಟ್ಟಿ ಕೊಂಡು ನೀರಿಗಿಳಿದರೆ ಪ್ರಯೋಜನವಿಲ್ಲ. ಆದರೆ ನಮಗೇನೋ ಆ ಗುಹೆಯನ್ನು ಇನ್ನೂ ಚೆನ್ನಾಗಿ ನೋಡಬೇಕೆಂಬ ಆಸೆ ಹೆಚ್ಚಾಗಿತ್ತು. ಬಹಳ ಹೊತ್ತು ಯೋಚನೆಮಾಡಿ, ಸಾಧ್ಯವಾದರೆ ಅಲ್ಲಿಗೆ ಒಂದು ಪಂಜು ಮಾಡಿಕೊಂಡು ಹೋಗಿ ಗುಹೆಯೊಳಗೆ ಅದನ್ನು ಹತ್ತಿಸಿ ಬೆಳಕಿನಲ್ಲಿ ಅವನ್ನು ನೋಡಿಕೊಂಡು ಬರಬೇಕೆಂದು ನಿಶ್ಚಯಿಸಿದೆವು. ಪಂಜು ಮಾಡುವುದೇನೂ ಸುಲಭದ ಕೆಲಸವಾಗಲಿಲ್ಲ. ಬೇಗ ಹತ್ತಿ

ಕೊಳ್ಳುವಂಥ ಒಂದು ಮರದ ತೊಗಟೆಯನ್ನು ಕತ್ತರಿಸಿ ಉದ್ದವಾದ ತುಂಡುಗಳಾಗಿ ಸೀಳಿ, ತುಂಡುಗಳನ್ನೆಲ್ಲಾ ಜೋಡಿಸಿ ಗೋಂದಿನಿಂದ ಆ ತುಂಡುಗಳನ್ನೆಲ್ಲಾ ಒಂದುಗೂಡಿಸಿ ಪಂಜು ತಯಾರು ಮಾಡಿದೆವು. ಆಮೇಲೆ ಅದು ನೀರಿನಲ್ಲಿ ಒದ್ದೆಯಾಗದಂತೆ ತೆಂಗಿನ ಬಟ್ಟೆಯನ್ನು ತಂದು ನಾಲ್ಕೈದು ಸುತ್ತು ಸುತ್ತಿದೆವು. ಜೊತೆಗೆ ಸ್ವಲ್ಪ ಒಣಗಿದ ಹುಲ್ಲು, ಬಿಲ್ಲು ಬಾಣ ಎಲ್ಲವನ್ನೂ ಸೇರಿಸಿ, ಅವನ್ನೂ ತೆಂಗಿನ ಬಟ್ಟೆಯಲ್ಲಿ ಸುತ್ತಿದೆವು. ಎಲ್ಲಾ ಸಿದ್ಧವಾದ ಮೇಲೆ ಅಲ್ಲಿ ಒರಟಾದ ಬಂಡೆಗಳನ್ನು ಹತ್ತಬೇಕಾದ ಸಂದರ್ಭವೊದಗಬಹುದು ಎಂದುಕೊಂಡು ಷರಾಯಿಗಳನ್ನು ಮಾತ್ರ ಹಾಕಿಕೊಂಡು ನಾನೊಂದು ಗಂಟನ್ನೂ ಜಾಕಿ ಇನ್ನೊಂದನ್ನೂ ತೆಗೆದುಕೊಂಡು ಬಂಡೆಯ ತುದಿಗೆ ಬಂದೆವು.

"ನಾವು ಬರುವುದು ತಡವಾದರೂ ಬೇಸರಪಟ್ಟುಕೊಳ್ಳಬೇಡ, ಪೀಟರ್. ನಿನ್ನನ್ನು ಹೆಚ್ಚು ಹೊತ್ತು ಕಾಯಿಸುವುದಿಲ್ಲ. ಗುಹೆಯಲ್ಲಿ ನೋಡಬೇಕಾದ ವಿಷಯ ಎಷ್ಟೇ ಇರಲಿ, ಅರ್ಧ ಘಂಟೆಯೊಳಗಾಗಿ ಬಂದು ಬಿಡುತ್ತೇವೆ." ಎಂದು ಜಾಕಿ ಪೀಟರಿಗೆ ಭರವಸೆ ಕೊಟ್ಟ.

ಪೀಟರಿನ ಅಸಮಾಧಾನವೆಲ್ಲಾ ಈಗ ಮಾಯವಾಗಿತ್ತು. ಆದರೂ ಬೇಕಾಗಿ ಬಹಳ ದುಃಖಪಡುವವನಂತೆ ನಟಿಸುತ್ತಾ ನಮ್ಮ ಬಳಿಗೆ ಬಂದು ಗಂಭೀರವಾಗಿ ನಮ್ಮಿಬ್ಬರ ಕೈಯನ್ನೂ ಹಿಡಿದು ಕುಲುಕಿದ.

"ಹೋಗಿ ಬರುತ್ತೀರಾ? ನೀವು ಹೋದ ಮೇಲೆ ಈ ಮರದ ನೆರಳಿನಲ್ಲಿ ಮಲಗಿ ನನ್ನ ದಣಿದ ಶರೀರಕ್ಕೆ ಸ್ವಲ್ಪ ವಿಶ್ರಾಂತಿ ಕೊಡುತ್ತೇನೆ. ನನ್ನಂಥ ಅದೃಷ್ಟಹೀನ ನಾವಿಕರು ನಶ್ವರವಾದ ಈ ಪ್ರಪಂಚದಲ್ಲಿ ಎಷ್ಟು ಕಷ್ಟಪಡಬೇಕೊ!"

ಹೀಗೆ ಒಂದು ಪುಟ್ಟ ಭಾಷಣ ಮಾಡಿ ಪೀಟರ್ ಬಹಳ ಸಂಕಟಪಡುವವನಂತೆ ಮರದ ನೆರಳಿನಲ್ಲಿ ಹೋಗಿ ಮಲಗಿದ. ಅವನು ಕಟ್ಟುತ್ತಿದ್ದ ಈ ನಾಟಕವನ್ನು ನೋಡಿ ನಮ್ಮಿಬ್ಬರಿಗೂ ನಗು ಬಂತು. ಕೂಡಲೆ ಇಬ್ಬರೂ ತಲೆ ಮೊದಲಾಗಿ ನೀರಿಗೆ ಧುಮುಕಿ ಯಾವ ತೊಂದರೆಗೂ ಸಿಕ್ಕದೆ ಒಂದು ನಿಮಿಷದೊಳಗೆ ನೀರೊಳಗಿನ ಗುಹೆಯನ್ನು ಸೇರಿದೆವು.

ನಮ್ಮ ಕಣ್ಣುಗಳು ಅಲ್ಲಿಯ ಕತ್ತಲೆಯನ್ನು ಅಭ್ಯಾಸ ಮಾಡಿಕೊಳ್ಳುವವರೆಗೆ ಸ್ವಲ್ಪ ಹೊತ್ತು ಹಾಗೆಯೇ ನೀರನ್ನು ತುಳಿಯುತ್ತಿದ್ದೆವು. ನಮ್ಮ ಪಂಜೂ, ಅದನ್ನು ಹತ್ತಿಸುವ ಸಾಮಾನೂ ಒದ್ದೆಯಾಗದಂತೆ ಗಂಟುಗಳನ್ನು ನೀರಿನಿಂದ ಮೇಲೆತ್ತಿ ಹಿಡಿದಿದ್ದೆವು. ಸುತ್ತ ಮುತ್ತ ಇದ್ದದ್ದೆಲ್ಲಾ ಚೆನ್ನಾಗಿ ಕಾಣುವ ಹಾಗಾದ ಮೇಲೆ ಎದುರಿಗಿದ್ದ ಬಂಡೆಯೊಂದರ ಬಳಿಗೆ ಈಜಿ ಹೋಗಿ ಅದನ್ನು ಹತ್ತಿ, ನಮ್ಮ ಷರಾಯಿಯನ್ನು ಹಿಂಡಿ ಮೈಯನ್ನೊರಸಿಕೊಂಡ ನಂತರ ಪಂಜು ಹತ್ತಿಸುವ ಪ್ರಯತ್ನ ಮಾಡಿದೆವು. ಗಂಟುಗಳು ಹೆಚ್ಚು ಹೊತ್ತು ನೀರಿನಲ್ಲಿ ಮುಳುಗಿರಲಿಲ್ಲವಾದ್ದರಿಂದ ಬಟ್ಟೆಯ ಸುರಳಿ ಒದ್ದೆಯಾಗಿದ್ದರೂ ಒಳಗಿದ್ದ ಸಾಮಾನಿಗೆ ನೀರೇನೂ ಅಂಟಿರಲಿಲ್ಲ. ಪಂಜು ಬಹಳ ಬೇಗಲೇ ಹತ್ತಿಕೊಂಡಿತು. ಗುಹೆಯಲ್ಲಿ ಅದರ ಬೆಳಕು ಹರಡಿದೊಡನೆಯೇ ಅದರ ಆಶ್ಚರ್ಯಕರವಾದ ಸ್ವರೂಪವನ್ನು ನೋಡಿ ಬೆರಗಾಗಿ ನಮ್ಮ ಮಾತೇ ನಿಂತು ಹೋಯಿತು.

ನಾವು ನಿಂತಿದ್ದ ಬಳಿ ಛಾವಣಿ ಸುಮಾರು ಹತ್ತು ಅಡಿ ಎತ್ತರವಿದ್ದಿರಬಹುದು. ಆದರೆ ಒಳಗೆ ಹೋದ ಹಾಗೆಲ್ಲಾ ಅದು ಮೇಲಕ್ಕೇರುತ್ತ ಬಂದು ಕೊನೆಗೆ ಕತ್ತಲಿನಲ್ಲಿ ಕಾಣದಂತಾಯಿತು. ಗುಹೆಯೆಲ್ಲ ಹವಳದಿಂದಲೇ ನಿರ್ಮಾಣವಾಗಿರಬೇಕೆಂದು ತೋರಿತು. ಹವಳದ ಕಂಬಗಳ ಮೇಲೆ ನಿಂತಿದ್ದ ಛಾವಣಿಯಿಂದ ಅಲ್ಲಲ್ಲಿಯೇ ದೊಡ್ಡ ನೀರ್ಗಲ್ಲುಗಳು ತೂಗು ಬಿದ್ದಿದ್ದವು. ನೀರ್ಗಲ್ಲೆಂದರೆ ಮಂಜು ಗಡ್ಡೆಯಲ್ಲ; ದ್ರವ ರೂಪದಲ್ಲಿದ್ದ ಒಂದು ಬಗೆಯ ಸುಣ್ಣ ಕಲ್ಲು. ಈ ನೀರು ಕೆಳಕ್ಕೆ ಹರಿದು ಬರುವುದರೊಳಗೇ ಗಟ್ಟಿಯಾಗಿ ಈ ತೂಗುಕಲ್ಲುಗಳು ನಿರ್ಮಾಣವಾಗಿರಬೇಕು. ಕೆಲವು ಹನಿಗಳು ಕೆಳಗೆ ಬಿದ್ದು ಅಲ್ಲಿ ಗಟ್ಟಿಯಾದ ಕಲ್ಲಾಗಿ, ಕೆಳಗಿನಿಂದ ಶಂಕುವಿನ ಆಕಾರದ ಕಂಬವು ನಿದಾನವಾಗಿ ಮೇಲಕ್ಕೆ ಏಳುತ್ತಿತ್ತು, ಮೇಲೆ ಗಟ್ಟಿಯಾಗುತ್ತ ಬಂದ ತೂಗುಕಲ್ಲೂ ಕೆಳಗಿನಿಂದ ಎದ್ದ ಕಲ್ಲುಕಂಬವೂ ಎಂದೋ ಒಂದು ದಿನ ಸೇರಿ ದೊಡ್ಡ ಕಂಬವಾಗುವುದು. ಅನೇಕ ಕಡೆ ಈ ಸೇರುವಿಕೆ ನಡೆದದ್ದರಿಂದಲೇ ಆ ದೊಡ್ಡ ಕಂಬಗಳು ತಯಾರಾಗಿರಬೇಕು. ಸ್ಥೂಲವಾಗಿ ನೋಡಿದರೆ ಯಾರೋ

ಶಿಲ್ಪಿಗಳು ಛಾವಣಿಯನ್ನು ಎತ್ತಿ ಹಿಡಿಯುವುದಕ್ಕೆ ಅವುಗಳನ್ನು ಉದ್ದೇಶ ಪೂರ್ವಕವಾಗಿ ಕಟ್ಟಿರಬೇಕೆಂದು ತೋರುತ್ತಿತ್ತು.

ಗವಿಯೊಳಗೆ ಸ್ವಲ್ಪದೂರ ನಡೆದು ಹೋದೆವು. ಕೊಳದ ನೀರಿನ ಮೇಲೆ ಮೃದುವಾಗಿ ಗಾಳಿ ಬೀಸಿ ಕಿರುದೆರೆಗಳನ್ನೆಬ್ಬಿಸಿದರೆ ಹೇಗೆ ಕಾಣು ತ್ತದೆಯೋ ಹಾಗೆ ಅಲ್ಲಿಯ ಕಲ್ಲು ನೆಲವೆಲ್ಲಾ ಸಣ್ಣ ಅಲೆಗಳಂತೆ ಕಾಣು ತ್ತಿತ್ತು. ಮೇಲಿನಿಂದ ಬಿದ್ದ ಸುಣ್ಣಕಲ್ಲಿನ ನೀರು ಹರಿದು ಗಟ್ಟಿಯಾಗಿ ಈ ನೆಲವನ್ನು ನಿರ್ಮಿಸಿರಬೇಕು. ಗೋಡೆಗಳಲ್ಲಿ ಅಲ್ಲಲ್ಲಿಯೇ ದ್ವಾರಗ ಳಿದ್ದು ಅಲ್ಲಿಂದಾಚೆಗೆ ಸಣ್ಣ ಸಣ್ಣ ಗುಹೆಗಳಿರುವಂತೆ ತೋರಿತು. ಈ ಗುಹೆಗಳನ್ನೆಲ್ಲಾ ಪರೀಕ್ಷಿಸಿ ನೋಡಲು ನಮಗೆ ಆಗ ಸಮಯವಿರಲಿಲ್ಲ. ಮೇಲೆ ನೋಡಿದರೆ ಪ್ರಸಿದ್ಧ ದೇವಾಲಯಗಳ ಛಾವಣಿಯಲ್ಲಿ ಅಂದವಾಗಿ ಕುಸುರಿ ಕೆಲಸ ಮಾಡಿರುವಂತೆ ಈ ಛಾವಣಿಯಲ್ಲೂ ಏನೋ ಅಲಂಕಾರ ಗಳು ಕಾಣುತ್ತಿದ್ದವು. ಗೋಡೆಗಳು, ನೆಲ, ಛಾವಣಿ, ಕಂಬಗಳು,— ಎಲ್ಲವೂ ನಮ್ಮ ಪಂಜಿನ ಬೆಳಕಿನಿಂದ ಮಿನುಗಿ ಆ ಬೆಳಕನ್ನು ಪ್ರತಿ ಬಿಂಬಿಸಿ ಹಿಂದಕ್ಕೆ ಎಸೆದದ್ದರಿಂದ ಅವುಗಳಲ್ಲೆಲ್ಲಾ ಸಾವಿರಾರು ದಿವ್ಯ ರತ್ನಗಳನ್ನು ಸೇರಿಸಿ ಕಟ್ಟಡದ ಕೆಲಸ ಮಾಡಿರಬೇಕೆನ್ನುವಂತೆ ತೋರು ತ್ತಿತ್ತು. ಮನುಷ್ಯರ ಕೈವಾಡವೇನೂ ಇಲ್ಲದೆ ಪ್ರಕೃತಿ ದೇವಿಯ ಶಕ್ತಿ ಯಿಂದ ತಾನಾಗಿ ಸೃಷ್ಟಿಯಾಗಿದ್ದ ಆ ಗವಿಯ ವೈಭವವನ್ನೂ ಸೌಂದ ರ್ಯವನ್ನೂ ಬಣ್ಣಿಸುವುದೇ ಸಾಧ್ಯವಿಲ್ಲ.

ಗವಿಯೊಳಕ್ಕೆ ನಾವು ಬಹು ದೂರ ಹೋಗಿ ನೋಡಿದೆವು. ಆದರೂ ಅದರ ಕೊನೆಯವರೆಗೂ ನೋಡುವುದಕ್ಕಾಗಲಿಲ್ಲ. ನಮ್ಮ ಪಂಜು ಅರ್ಧ ಉರಿದು ಹೋಗಿತ್ತು. ಆದ್ದರಿಂದ ಇನ್ನೂ ಸ್ವಲ್ಪ ಹೊತ್ತು ಅಲ್ಲಿಯೇ ಇರಬೇಕೆಂಬ ಆಸೆಯಿದ್ದರೂ ಆತುರದಿಂದ ಹಿಂದಿರುಗಬೇಕಾಯಿತು. ಛಾವಣಿಯಲ್ಲೇನೂ ಬಿರುಕು ಇರಲಿಲ್ಲವಾದ್ದರಿಂದ ಮೇಲಿನಿಂದ ಗುಹೆಗೆ ಬೆಳಕು ಬರುವುದು ಸಾಧ್ಯವಿರಲಿಲ್ಲ. ಆದರೆ ಗುಹೆಯ ದ್ವಾರಪ್ರದೇಶದ ಬಳಿ ದೊಡ್ಡದೊಂದು ಹವಳದ ಬಂಡೆಯಿದ್ದು, ಹೊರಗಿನಿಂದ ಮೇಲೆಬಿದ್ದ ಅಲ್ಪಸ್ವಲ್ಪ ಬೆಳಕನ್ನು ಅದು ಪ್ರತಿಬಿಂಬಿಸಿ ಮತ್ತೆ ಹೊರಕ್ಕೆ ಎಸೆಯು ತ್ತಿತ್ತು. ಮೇಲಿನಿಂದ ಮೊದಲು ನಮ್ಮ ಕಣ್ಣಿಗೆ ಬಿದ್ದಿದ್ದ ಹಸುರು ಬೆಳ

ಕಿಗೆ ಇದೇ ಮೂಲವಾಗಿರಬೇಕು. ಆ ಬಂಡೆಯಿಂದ ಹೊರಟ ಬೆಳಕೇ ಗವಿಯ ಮುಂಭಾಗದಲ್ಲಿ ಮಂಜುಮಂಜಾಗಿ ಕಾಣುತ್ತಿತ್ತು ದಕ್ಷಿಣ ಸಾಗರದ ದ್ವೀಪಗಳಲ್ಲಿ ಅನೇಕ ಕಡೆ ಹೀಗೆಯೇ ನಿರ್ಮಿತವಾದ ಗುಹೆಗಳಿವೆಯಂತೆ. ಅವುಗಳಲ್ಲಿ ಕೆಲವು ನಮ್ಮ ಗುಹೆಗಿಂತ ವಿಶಾಲವಾಗಿಯೂ ಸುಂದರವಾಗಿಯೂ ಇವೆಯೆಂದು ನಮಗೆ ಬಹಳ ದಿನಗಳ ಮೇಲೆ ಗೊತ್ತಾಯಿತು. ಗುಹೆ ರತ್ನಖಚಿತವಾಗಿದ್ದಂತೆ ಕಂಡದ್ದರಿಂದ ನಾವು ಅದಕ್ಕೆ ವಜ್ರದ ಗುಹೆ ಎಂದು ಹೆಸರಿಟ್ಟೆವು.

ನಾವು ಗುಹೆಯಿಂದ ವಾಪಸು ಹೊರಡುವುದಕ್ಕೆ ಮುಂಚೆ ಅರ್ಧಮಾತ್ರ ಉಳಿದಿದ್ದ ಪಂಜನ್ನು ಆರಿಸಿ, ನೀರು ಬೀಳದೆ ಇರುವ ಜಾಗದಲ್ಲಿ ಅದನ್ನು ಇಟ್ಟು ಬಂದೆವು. ಮತ್ತೆ ಯಾವಾಗಲಾದರೂ ನಾವು ಗುಹೆಗೆ ಬಂದಾಗ ಹೊಸ ಪಂಜನ್ನು ತಂದರೂ ಮುಳುಗಿ ಬರುವಾಗ ದಾರಿಯಲ್ಲಿ ಅದು ಒದ್ದೆಯಾಗಬಹುದು. ಆದ್ದರಿಂದ ಇದೊಂದು ಅಲ್ಲಿಯೇ ಇದ್ದರೆ ಒಳ್ಳೆಯದೆಂದು ತೋರಿತು. ಪಂಜನ್ನು ಆರಿಸಿದ ಮೇಲೆ ಕತ್ತಲೆಗೆ ಕಣ್ಣು ಹೊಂದಿಕೊಳ್ಳುವವರೆಗೆ ಅಲ್ಲಿಯೇ ನಿಂತು, ಗವಿಯೊಳಗೆ ಇದ್ದ ಅಗಾಧವಾದ ಮೌನವನ್ನೂ ಕತ್ತಲೆಯನ್ನೂ ಕಂಡು ಆಶ್ಚರ್ಯಪಟ್ಟೆವು.

“ಇನ್ನು ಹೊರಡೋಣವೆ, ರೋವರ್?” ಜಾಕಿಯ ಮಾತು ಗವಿಯ ಎಲ್ಲ ಕಡೆಯಿಂದಲೂ ಮರುದನಿ ಕೊಟ್ಟಿತು.

“ಓಹೋ, ಹೊರಡೋಣ.”

“ನಡಿ, ಹಾಗಾದರೆ.” ಮತ್ತೆ ನೀರಿನಲ್ಲಿ ಮುಳುಗಿ ಹೊರಹೊರಟು ಒಂದು ನಿಮಿಷದೊಳಗಾಗಿ ಪೀಟರಿನ ಜೊತೆ ಸೇರಿಕೊಂಡೆವು. ಅವನೇನೋ ಬಹಳ ಬೇಸರಪಟ್ಟು ಕಾದಿದ್ದನು. ಆದರೆ ನಮ್ಮ ಅನುಭವವನ್ನೆಲ್ಲಾ ಕೇಳಿ ಅವನ ಮುಖವೂ ಗೆಲುವಾಯಿತು.

೮

# ಕಿರಾತರೊಡನೆ ಕದನ

ಕೆಲವು ತಿಂಗಳು ಹೀಗೆಯೇ ಸುಖವಾಗಿ ಕಾಲಕಳೆಯಿತು. ಒಂದು ದಿನ ಅನಿರೀಕ್ಷಿತವಾಗಿ ವಿಶೇಷ ಸಂಗತಿಯೊಂದು ನಡೆಯಿತು. ಅದ ರಿಂದ ನಮ್ಮ ಜೀವನ ಇದ್ದಕ್ಕಿದ್ದ ಹಾಗೆಯೆ ಭಯಂಕರವಾಗಿ ಪರಿಣ ಮಿಸಿತು.

ಪೀಟರ್ ಬಂಡೆಗಳ ತುದಿಯಲ್ಲಿ ಕುಣಿದಾಡುವುದು ಹೆಚ್ಚು. ಆಗಿಂದಾಗ ಕಾಲು ಜಾರಿ ನೀರಿಗೆ ಬೀಳುವುದು ಪದ್ಧತಿಯಾಗಿ ಹೋಗಿತ್ತು. ಒಂದು ದಿನ ಹೀಗೇ ನೀರಿಗೆ ಬಿದ್ದು ಮೇಲಕ್ಕೆ ಬಂದು ತನ್ನ ಬಟ್ಟೆಗಳನ್ನು ಹಿಂಡಿಕೊಳ್ಳುತ್ತಿದ್ದನು. ಪದ್ಧತಿಯ ಪ್ರಕಾರ ಆ ದಿನವೂ ನಾನೂ ಜಾಕಿಯೂ ವಜ್ರದ ಗುಹೆಯ ಹತ್ತಿರ ಬಂಡೆಗಳ ಮೇಲೆ ಕುಳಿತಿದ್ದೆವು. ನಾನು ಯಾವುದೋ ಜ್ಞಾನದಲ್ಲಿ ಸಮುದ್ರದ ಕಡೆ ನೋಡಿದೆ. ದಿಗಂತದಲ್ಲಿ ಸಮುದ್ರದ ಮೇಲೆ ಎರಡು ಕರಿಯ ಪದಾರ್ಥಗಳು ಕಂಡು ಬಂದವು.

" ಜಾಕಿ, ಅಲ್ಲಿ ಕಾಣುವುದೇನು ನೋಡು.''

" ಏನೋ ಹೇಳುವುದಕ್ಕಾಗುವುದಿಲ್ಲ. ಒಂದೆರಡು ನಿಮಿಷಗಳಿಂದ ನಾನೂ ಅದನ್ನೇ ನೋಡುತ್ತಾ ಇದೇನೆ. ಮೊದಲು ನೋಡಿದಾಗ ಯಾವುದೋ ಸಮುದ್ರದ ಹಕ್ಕಿಗಳಿರಬೇಕು ಎಂದುಕೊಂಡೆ. ಈಗ ನೋಡಿದರೆ ಹಕ್ಕಿಗಳೆಂದು ತೋರುವುದಿಲ್ಲ. ಹಕ್ಕಿಗಳು ಅಷ್ಟು ದೊಡ್ಡ ವಾಗಿರುವುದಿಲ್ಲ."

" ಅವು ನಮ್ಮ ಕಡೆಗೇ ಬರುತ್ತಿರುವ ಹಾಗೆ ಕಾಣುತ್ತದೆ, ಅಲ್ಲವೆ? ನೋಡು, ಬರಬರುತ್ತಾ ದೊಡ್ಡದಾಗಿ ಕಾಣುತ್ತವೆ."

ಬಟ್ಟೆಗಳನ್ನು ಹಿಂಡಿಕೊಂಡು ಪೀಟರ್ ನಮ್ಮ ಕಡೆಗೆ ತಿರುಗಿದ.

" ಏನಯ್ಯ ಅದು, ಅಷ್ಟೊಂದು ಆಸಕ್ತಿಯಿಂದ ನೋಡುತ್ತಾ ಇದ್ದೀರಿ ? "

" ಅಲ್ಲಿ ನೋಡು, ಅವು ಏನಿರಬಹುದು ಹೇಳು."

ಪೀಟರ್ ಬಿಸಿಲಿಗೆ ತನ್ನ ಕೈಯನ್ನು ಮರೆಮಾಡಿಕೊಂಡು ನೋಡಿದ.

" ಮೀನುಗಳಿರಬೇಕು....ಅಲ್ಲ, ಮೀನಲ್ಲ, .....ಅವು ದೋಣಿಗಳು ಅಂತ ಕಾಣುತ್ತೆ, ಅಲ್ಲವೆ ಜಾಕಿ ? "

ಮತ್ತೆ ಮನುಷ್ಯರ ಮುಖ ನೋಡಬಹುದೆಂದು ನನಗೆ ಬಹಳ ಸಂತೋಷವಾಯಿತು.

" ನೀನು ಹೇಳುವುದು ನಿಜ ಅಂತ ತೋರುತ್ತೆ. ಆದರೂ ಅವು ಬರುತ್ತಾ ಇರುವ ರೀತಿ ನೋಡಿದರೆ ಸಾಧಾರಣವಾಗಿ ದೋಣಿಗಳು ಬರುವ ರೀತಿಯಲ್ಲ, " ಎಂದು ಜಾಕಿ ತನಗೆ ತಾನೇ ಮಾತಾಡಿಕೊಳ್ಳು ವಂತೆ ಮೆಲ್ಲಗೆ ಹೇಳಿ, ಆ ವಸ್ತುಗಳ ಕಡೆಗೇ ದೃಷ್ಟಿಯನ್ನು ನೆಟ್ಟು ಒಂದೆರಡು ನಿಮಿಷ ಮೌನವಾಗಿ ನಿಂತಿದ್ದನು. ಮುಖ ನೋಡಿದರೆ ಬಹಳ ಯೋಚನೆಯಲ್ಲಿ ಮುಳುಗಿದ್ದಂತೆ ತೋರಿತು. ಅವುಗಳಂತೂ ನಿಮಿಷ ನಿಮಿಷಕ್ಕೂ ಹತ್ತಿರ ಬರುತ್ತಿದ್ದವು. ಕೊನೆಗೆ ಜಾಕಿ ಚಂಗನೆ ಮೇಲಕ್ಕೆದ್ದನು.

" ರೋವರ್, ಅವು ನಾವು ನೋಡಿರುವ ದೋಣಿಗಳಲ್ಲ. ಕಾಡು ಜನರು ಉಪಯೋಗಿಸುವ ತೋಡುದೋಣಿಗಳು. ಯುದ್ಧದ ದೋಣಿ ಗಳಿದ್ದರೂ ಇರಬಹುದು—ಹೇಳುವುದಕ್ಕಾಗುವುದಿಲ್ಲ. ಒಂದು ವಿಷಯ ಮಾತ್ರ ದೃಢವಾಗಿ ಹೇಳಬಹುದು—ಈ ದಕ್ಷಿಣದ್ವೀಪಗಳಲ್ಲಿರುವ ಕಿರಾ ತರೆಲ್ಲರೂ ಮಹಾ ಕ್ರೂರಿಗಳು, ನರಭಕ್ಷಕರು. ಅವರು ಯಾರನ್ನು ಕಂಡರೂ ದಯೆದಾಕ್ಷಿಣ್ಯಗಳಿಲ್ಲದೆ ನಡೆದುಕೊಳ್ಳುತ್ತಾರೆ. ಅವರು ಈ ದ್ವೀಪದಲ್ಲಿ ಇಳಿಯದೆ ಹೋದರೆ ಬದುಕಿದೆವು. ಇಳಿದರೆ ನಾವು ಅವರ ಕಣ್ಣಿಗೆ ಬೀಳದ ಹಾಗೆ ಅವಿತುಕೊಳ್ಳಬೇಕು."

ಜಾಕಿಯ ಮಾತು ಕೇಳಿ ನಾವು ಬಹಳ ಹೆದರಿದೆವು. ಅವನು ಬಾಯಲ್ಲಿ ಆಡಿದ ಮಾತಿಗಿಂತ ಅವನ ಗಂಭೀರವಾದ ಮುಖ, ಮಾತಿನ ರೀತಿ—ಇವುಗಳಿಂದ ನಮ್ಮ ಹೆದರಿಕೆ ಹೆಚ್ಚಾಯಿತು. ಅವನನ್ನು ಹಿಂಬಾಲಿಸಿ ಹತ್ತಿರದ ಕಾಡಿಗೆ ಹೋಗುತ್ತಿದ್ದಾಗ ನಮ್ಮೆಲ್ಲರ ಮನಸ್ಸೂ

ತಳಮಳಿಸುತ್ತಿತ್ತು.

ಕಾಡಿನಲ್ಲಿ ದಟ್ಟವಾಗಿ ಬೆಳೆದಿದ್ದ ಮೆಳೆಯಲ್ಲಿ ಮೂರು ಜನರೂ ಅಡಗಿಕೊಂಡೆವು. ಆಗ ನನಗೆ ನಮ್ಮ ಈಟಿ ಮತ್ತು ಕೊಡಲಿಗಳ ಜ್ಞಾಪಕವಾಯಿತು.

"ಎಂಥ ಕೆಲಸ ಮಾಡಿದೆವು! ನಮ್ಮ ಆಯುಧಗಳನ್ನಾದರೂ ತಂದಿದ್ದರೆ ಚೆನ್ನಾಗಿತ್ತು."

"ಇಲ್ಲದಿದ್ದರೆ ಪರವಾಯಿಲ್ಲ, ಇಲ್ಲಿ ಬೇಕಾದಷ್ಟು ದೊಣ್ಣೆಗಳಿವೆಯಲ್ಲ, ಅವೇ ಸಾಕು."

ಜಾಕಿ ಹೇಳಿದಂತೆ ಅಲ್ಲಿ ಹತ್ತಿಪ್ಪತ್ತು ದೊಣ್ಣೆಗಳು ಬಿದ್ದಿದ್ದವು. ಕೆಲಸವೇನೂ ಇಲ್ಲದಿದ್ದರೆ ಪೀಟರಿನ ಕೈ ಕಡಿಯುತ್ತದೆ. ಅವನು ಆ ಕಡೆ ಬಂದಾಗಲೆಲ್ಲಾ ಮರದ ಕೊಂಬೆಗಳನ್ನು ಕಡಿದು ದೊಣ್ಣೆಗಳನ್ನು ಮಾಡಿದ್ದನು. ಅವು ಯಾವ ಉಪಯೋಗಕ್ಕೂ ಬೇಕಿರಲಿಲ್ಲ; ಕೇವಲ ಹೊತ್ತು ಹೋಗುವುದಕ್ಕಾಗಿ ಮಾಡಿದ್ದಾದ್ದರಿಂದ ಪೀಟರ್ ಅವುಗಳನ್ನು ಅಲ್ಲಿಯೇ ಬಿಟ್ಟಿದ್ದನು. ಮೂವರೂ ಬಲವಾದ ದೊಣ್ಣೆಗಳನ್ನು ಕೈಯಲ್ಲಿ ಹಿಡಿದು ಒಂದು ಬಂಡೆಯ ಹಿಂದೆ ಕುಳಿತೆವು. ನಾವು ಮರೆಂಗಾಗಿದ್ದರೂ ತೀರ ಪ್ರದೇಶವೆಲ್ಲಾ ನಮಗೆ ಕಾಣುತ್ತಿತ್ತು. ದೋಣಿಗಳು ಬಂಡೆಯ ಸಾಲಿನ ಬಳಿಗೆ ಬರುವವರೆಗೂ ನಾವು ಆಗಿಂದಾಗ ಒಂದೊಂದು ಮಾತಾಡುತ್ತಿದ್ದೆವು. ಆದರೆ ಅವು ಒಳಗಡಲಿಗೆ ಬಂದಮೇಲೆ ಎಲ್ಲರೂ ಒಂದು ಮಾತೂ ಆಡದೆ ನಿಶ್ಶಬ್ದವಾಗಿ ಕುಳಿತು ನಡೆದದ್ದನ್ನೆಲ್ಲಾ ಬಹಳ ಆಸಕ್ತಿಯಿಂದ ನೋಡುತ್ತಿದ್ದೆವು.

ದೋಣಿಗಳು ಇನ್ನೂ ಹತ್ತಿರ ಬಂದವು. ಒಂದನ್ನು ಇನ್ನೊಂದು ಅಟ್ಟಿಕೊಂಡು ಬರುತ್ತಿತ್ತೆಂದು ಈಗ ಸ್ಪಷ್ಟವಾಗಿ ಗೊತ್ತಾಯಿತು. ಮೊದಲನೆಯ ದೋಣಿಯಲ್ಲಿ ಹೆಂಗಸರು, ಮಕ್ಕಳು, ಕೆಲವರು ಗಂಡಸರು—ಒಟ್ಟು ಸುಮಾರು ನಲವತ್ತು ಜನರಿದ್ದಿರಬಹುದು. ಹಿಂದಿನ ದೋಣಿಯಲ್ಲಿದ್ದವರೆಲ್ಲಾ ವಯಸ್ಕರಾದ ಗಂಡಸರೇ. ಅವರ ಸಂಖ್ಯೆಯೂ ಮೊದಲಿನ ದೋಣಿಯಲ್ಲಿದ್ದಷ್ಟೇ. ಆದರೂ ಅವರಲ್ಲಿ ಆಯುಧಗಳು ಹೆಚ್ಚಾಗಿದ್ದಂತೆ ತೋರಿತು. ಯುದ್ಧಕ್ಕೆ ಸಿದ್ಧರಾಗಿ ಬಂದಿರಬೇಕು.

ಎರಡು ದೋಣಿಯವರೂ ತಮ್ಮ ಶಕ್ತಿಯನ್ನೆಲ್ಲಾ ಬಿಟ್ಟು ಹುಟ್ಟು ಹಾಕುತ್ತಿದ್ದರು. ಹಿಂದಿದ್ದವರಂತೂ ಮುಂದಿನ ದೋಣಿ ದಡವನ್ನು ಮುಟ್ಟುವುದಕ್ಕೆ ಮುಂಚೆಯೇ ಅದನ್ನು ಹಿಡಿಯಬೇಕೆಂದು ವಿಶ್ವ ಪ್ರಯತ್ನ ಮಾಡುತ್ತಿದ್ದರು. ಆದರೆ ಅವರ ಸಂಕಲ್ಪ ನೆರವೇರಲಿಲ್ಲ.

ಮುಂದಿನ ದೋಣಿ ನಾವು ಕುಳಿತಿದ್ದ ಸ್ಥಳಕ್ಕೆ ಹತ್ತಿರದಲ್ಲೇ ದಡ ಸೇರಲು ಬರುತ್ತಿತ್ತು. ಗಂಡಸರ ಕೈಯಲ್ಲಿದ್ದ ಹುಟ್ಟುಗಳು ಕ್ಷಣಕ್ಷಣಕ್ಕೂ ನೀರಿಗೆ ಬಿದ್ದು ಮೇಲಕ್ಕೆದ್ದಾಗ ಬಿಸಿಲಿನಲ್ಲಿ ಥಳಥಳಿಸಿ ಒಂದೇ ಸಮನಾಗಿ ಹನಿಗಳನ್ನು ಎರಚುತ್ತಿದ್ದವು. ದೋಣಿಯ ಮುಂದಿನ ತುದಿ ನೀರನ್ನು ಕತ್ತರಿಸಿಕೊಂಡು ಬರುತ್ತಿತ್ತು. ಹುಟ್ಟುಹಾಕುವವರ ಕರಿಯ ಮುಖದಲ್ಲಿ ಅವರ ದೃಢಪ್ರತಿಜ್ಞೆಯನ್ನು ಸೂಚಿಸುವಂತೆ ಕಣ್ಣಿನ ಹೊಳಪು ಕಾಣುತ್ತಿತ್ತು. ಅತಿವೇಗದಿಂದ ದೋಣಿ ಸಾಗಿಬಂದು ಬಲ ವಾಗಿ ದಂಡೆಗೆ ಬಡಿಯಿತು. ಕ್ಷಣಮಾತ್ರದಲ್ಲಿ ಅದರಲ್ಲಿದ್ದವರೆಲ್ಲರೂ ನೆಲಕ್ಕೆ ನೆಗೆದರು. "ಇನ್ನೇನು, ನಾವು ಗೆದ್ದೆವು" ಎನ್ನುವಂತೆ ಎಲ್ಲರ ಕಂಠ ದಿಂದಲೂ ಒಂದು ಕೂಗು ಹೊರಟಿತು. ಒಡನೆಯೇ ಮಕ್ಕಳನ್ನೆತ್ತಿ ಕೊಂಡಿದ್ದ ಮೂವರು ಹೆಂಗಸರು ಕಾಡಿನ ಕಡೆಗೆ ಓಡಿದರು. ಗಂಡಸರು ಮಾತ್ರ ಕೈಯಲ್ಲಿ ಕಲ್ಲು, ಈಟಿ, ದೊಣ್ಣೆ ಮುಂತಾದ್ದನ್ನು ಹಿಡಿದು ಗುಂಪಾಗಿ ನೀರಿನ ಅಂಚಿನಲ್ಲೇ ನಿಂತರು. ತಮ್ಮ ಶತ್ರುಗಳು ದೋಣಿ ಯಿಂದ ಇಳಿಯುವದನ್ನೇ ತಪ್ಪಿಸಬೇಕೆಂದು ಅವರು ಅಲ್ಲಿಯೇ ಕಾದಿದ್ದರು.

ಅವರು ದಡ ಸೇರಿದಾಗ ಹಿಂದಿನ ದೋಣಿಯವರು ಸುಮಾರು ಅರ್ಧ ಮೈಲಿಯಷ್ಟು ಹಿಂದಿದ್ದರು. ಆದರೆ ಬಹಳ ವೇಗವಾಗಿ ಬರು ತ್ತಿದ್ದುದರಿಂದ ಕೆಲವು ನಿಮಿಷಗಳಲ್ಲೇ ಅವರೂ ದಡದ ಹತ್ತಿರ ಬಂದರು. ದಡದಲ್ಲಿದ್ದವರ ಮುಖದಲ್ಲಿ ಸ್ವಲ್ಪವೂ ಭಯದ ಚಿಹ್ನೆ ಕಾಣಲಿಲ್ಲ. ಎರಡ ನೆಯ ದೋಣಿ ಜೂಜಿನ ಕುದುರೆಯಂತೆ ವೇಗವಾಗಿ ಬಂತು. ದಡದಿಂದ ಇನ್ನೂ ಎರಡು ಮಾರು ದೂರವಿದ್ದಾಗಲೇ ಅವರ ಮೇಲೆ ಶತ್ರುಗಳು ಕಲ್ಲಿನ ಮಳೆ ಕರೆದರು. ಆದರೆ ದೋಣಿಯವರು ಅದನ್ನು ಗಮನಕ್ಕೇ ತಂದುಕೊಳ್ಳಲಿಲ್ಲ. ದೋಣಿ ದಡಕ್ಕೆ ಬಡಿದೊಡನೆ ವಿಕಾರವಾಗಿ ಅರ

ಚುತ್ತಾ ಎಲ್ಲರೂ ನೆಲಕ್ಕೆ ಹಾರಿ ಶತ್ರುಗಳೊಡನೆ ಕಾದಿ ಅವರನ್ನು ಹಿಂದ ಹಿಂದಕ್ಕೆ ಓಡಿಸಿಕೊಂಡು ಬಂದರು.

ಆಗ ನಡೆದ ಯುದ್ಧ ಕಣ್ಣಿನಿಂದ ನೋಡಲಾರದಷ್ಟು ಭಯಂಕರ ವಾಗಿತ್ತು. ಪ್ರತಿಯೊಬ್ಬನ ಕೈಯಲ್ಲೂ ಗಂಟುಗಂಟಾದ ಮರದಿಂದ ಮಾಡಿದ ದಪ್ಪ ದೊಣ್ಣೆಗಳಿದ್ದವು. ಅವುಗಳಿಂದ ಗುರಿಯಿಟ್ಟು ಹೊಡೆದು ಶತ್ರುಗಳ ತಲೆಯನ್ನು ಚೂರುಮಾಡುತ್ತಿದ್ದರು. ಅವರೆಲ್ಲರೂ ಮುಕ್ಕಾಲು ಬೆತ್ತಲೆಯಾಗಿದ್ದರು ; ಮೈಯೆಲ್ಲ ಕಾಡಿಗೆಯಂತೆ ಕಪ್ಪು ; ಕೆದರಿದ ತಲೆ. ವಿಕಾರವಾಗಿ ಅರಚುತ್ತ ಓಡಿ, ನೆಗೆದು, ದೊಣ್ಣೆಗಳನ್ನು ಬೀಸಿ ಮಲ್ಲಯುದ್ಧಮಾಡಿ ಕೊಲೆಮಾಡುತ್ತಿದ್ದ ಈ ಜನರನ್ನು ನೋಡಿದರೆ ಇವರೇನು ಮನುಷ್ಯರೋ ಅಥವಾ ಪಿಶಾಚಿಗಳೋ ಎಂಬ ಸಂದೇಹ ಬರುವ ಹಾಗಿತ್ತು. ಹೀಗೆ ನಿರ್ದಯರಾಗಿ ಒಬ್ಬರನ್ನೊಬ್ಬರು ಸದೆಬಡಿದು ರಕ್ತ ಹರಿಸುತ್ತಿದ್ದುದನ್ನು ನೋಡಿ ನನ್ನ ಹೃದಯ ಒಂದೇ ಸವನೆ ದಿಗಿಲಿನಿಂದ ತುಡಿಯುತ್ತಿತ್ತು. ಒಂದು ಸಾರಿಯಂತೂ ಮೂರ್ಛೆ ಹೋಗುವಂತಾಗಿ ಮತ್ತೆ ಆ ಕಡೆ ನೋಡಲೇಬಾರದು ಎಂದುಕೊಂಡೆನು. ಆದರೂ ಯಾವುದೋ ಒಂದು ಸೆಳೆತಕ್ಕೆ ಸಿಕ್ಕಿ ಬೇಡ ಬೇಡವೆಂದರೂ ಕಣ್ಣು ಅಲ್ಲಿಯೇ ನೆಟ್ಟುಹೋಗಿತ್ತು. ಅಟ್ಟಿಸಿಕೊಂಡು ಬಂದವರ ಗುಂಪಿನಲ್ಲಿ ಬಹಳ ವಿಚಿತ್ರವಾದ ರೂಪಿನವನೊಬ್ಬನ ಕಡೆಗೆ ನನ್ನ ಗಮನ ಹೋಯಿತು. ಅವನ ಎತ್ತರ, ಬಲವಾದ ಮೈಕಟ್ಟು, ವಿಚಿತ್ರವಾದ ಅಲಂಕಾರ, ಎಲ್ಲವನ್ನೂ ನೋಡಿದರೆ ಅವನೇ ಆ ಗುಂಪಿನ ನಾಯಕನಿರಬೇಕೆಂದು ತೋರಿತು. ವಿಪರೀತವಾಗಿ ಬೆಳೆದಿದ್ದ ಕೂದಲನ್ನು ತಲೆಯಮೇಲೆ ರುಮಾಲಿನಂತೆ ಕಟ್ಟಿಕೊಂಡಿದ್ದನು. ಅದರ ಬಣ್ಣವನ್ನು ನೋಡಿ ನನಗೆ ಆಶ್ಚರ್ಯವಾಯಿತು. ಅವನ ಮೈಯನ್ನು ನೋಡಿದರೆ ಇದ್ದಲಿನಂತೆ ಕಪ್ಪು; ಕೂದಲು ಮಾತ್ರ ಅರಿಶಿನದ ಬಣ್ಣ. ಬಹುಶಃ ಕೂದಲಿಗೆ ಬಣ್ಣ ಹಾಕಿಕೊಂಡಿದ್ದಿರಬೇಕು. ತಲೆಯಿಂದ ಕಾಲಿನವರೆಗೆ ಪಟ್ಟಿಪಟ್ಟಿಯಾಗಿ ಬಣ್ಣ ಬಳಿದುಕೊಂಡಿದ್ದನು. ಆನೆಯಂಥ ಶರೀರ, ಮಾಗಿ ಹಳದಿಯಾದ ಹಲಸಿನ ಹಣ್ಣಿನಂತೆ ಕಾಣುವ ತಲೆಗೂದಲು, ಭಯಂಕರವಾಗಿ ಬಣ್ಣ ಬಳಿದ ಕಪ್ಪು ಮೈ—ಅವನೇನಾದರೂ ಚಿಕ್ಕ ಮಕ್ಕಳ

ಕಣ್ಣಿಗೆ ಬಿದ್ದರೆ ಅವು ಕಿಟ್ಟನೆ ಕಿರಿಚಿಕೊಂಡು ಮೂರ್ಛೆ ಹೋಗುವುದು ಖಂಡಿತ. ಯುದ್ಧದಲ್ಲಿಯೂ ಅವನ ಪರಾಕ್ರಮ ಅದ್ಭುತವಾದದ್ದು. ಆಗಲೇ ಅವನು ನಾಲ್ಕು ಜನರನ್ನು ಆಹುತಿ ತೆಗೆದುಕೊಂಡಿದ್ದನು.

ನಾನು ನೋಡುತ್ತಿದ್ದ ಹಾಗೇ ಅವನಷ್ಟೇ ಎತ್ತರವಾಗಿಯೂ ದೃಢಕಾಯನಾಗಿಯೂ ಇದ್ದ ಮತ್ತೊಬ್ಬ ಯೋಧನು ಅವನೊಡನೆ ಯುದ್ಧಕ್ಕೆ ನಿಂತನು. ಅವನ ಕೈಯಲ್ಲಿದ್ದ ಲಾಠಿಯ ತುದಿಯಲ್ಲಿ ಗರುಡನ ಮೂಗಿನಂತೆ ಬಾಗಿದ್ದ ಅಲಗು ನೆಟ್ಟಿತ್ತು. ಅದನ್ನು ಬೀಸುತ್ತಾ ನೆಗೆದು ಬಂದು ಶತ್ರುವನ್ನು ಎದುರಿಸಿದನು. ಇಬ್ಬರೂ ಕ್ಷಣಕಾಲ ಎದುರಾಳಿಯ ಚಲನವನ್ನೇ ಕಾಯುತ್ತಾ ನಿಂತರು; ಆಮೇಲೆ ಕುಸ್ತಿ ಮಾಡುವವರಂತೆ ಒಬ್ಬರ ಸುತ್ತ ಮತ್ತೊಬ್ಬರು ತಿರುಗಿದರು. ಶತ್ರುವೇನಾದರೂ ಸ್ವಲ್ಪ ಅಜಾಗರೂಕನಾಗಿದ್ದರೆ ಆ ಸಮಯದಲ್ಲಿ ಅವನನ್ನು ಹೊಡೆದು ಹಾಕಬೇಕೆಂಬ ಉದ್ದೇಶವಿದ್ದಿರಬಹುದು. ಆದರೆ ಇಬ್ಬರೂ ನುರಿತ ಯೋಧರು; ಸುಲಭವಾಗಿ ಸಿಕ್ಕಿ ಬೀಳುವವರಲ್ಲ ಒಂದು ನಿಮಿಷ ಹೀಗೆ ಕಳೆದ ಮೇಲೆ ಇದು ಕೇವಲ ಕಾಲಹರಣವೆಂದು ತಿಳಿದುಕೊಂಡರು. ಇನ್ನು ತಡಮಾಡಿದರೆ ಅಪಾಯ ಹೆಚ್ಚು; ಬೇರೊಂದು ಕಡೆ ತಮ್ಮ ಪಕ್ಷದವರು ಸಾಯುತ್ತಿರಬಹುದು. ಆದ್ದರಿಂದ ಇಬ್ಬರೂ ಏಕಕಾಲದಲ್ಲಿಯೇ ಮೇಲೆ ಬೀಳುವ ಯೋಚನೆಮಾಡಿರಬೇಕು. ಒಂದೇ ಕ್ಷಣದಲ್ಲಿ ಇಬ್ಬರೂ ನೆಗೆದು ಎದೆ ನಡುಗುವಂತೆ ಗರ್ಜಿಸಿ ತಮ್ಮ ಲಾಠಿಗಳನ್ನು ಬೀಸಿದರು. ಪೆಟ್ಟು ಯಾರಿಗೂ ತಗಲಲಿಲ್ಲ. ಲಾಠಿಗಳು ಒಂದಕ್ಕೊಂದು ಬಡಿದು ಬಲವಾದ ಸದ್ದಾಯಿತು. ಮತ್ತೆ ಲಾಠಿಗಳನ್ನು ಬೀಸಿದರು. ಹೀಗೆ ಒಂದೆರಡು ನಿಮಿಷ ಕಳೆದ ಮೇಲೆ ಹಳದಿ ಕೂದಲಿನವನು ಹಠಾತ್ತಾಗಿ ಜಾರಿದನು. ಇದೇ ಸಮಯವೆಂದು ಅವನ ಶತ್ರು ಲಾಠಿಯನ್ನೆತ್ತಿ ಮುಂದಕ್ಕೆ ನೆಗೆದು ಬಂದನು. ಆದರೆ ಆ ಪೆಟ್ಟು ಬೀಳುವುದರೊಳಗೆ ಅವನ ತಲೆಗೆ ಒಂದು ಕಲ್ಲಿನ ಏಟು ತಗಲಿ ಅವನೇ ಕೆಳಗೆ ಬಿದ್ದನು. ತಮ್ಮ ನಾಯಕನು ಜಾರಿದ್ದನ್ನು ನೋಡಿ ಶತ್ರು ಪಕ್ಷದವರು ಯಾರೋ ಆ ಕಲ್ಲನ್ನು ಬೀರಿದ್ದರು.

ಅಲ್ಲಿಗೆ ಯುದ್ಧದ ಫಲಿತಾಂಶ ನಿಶ್ಚಯವಾದ ಹಾಗಾಯಿತು.

ಮೊದಲಿನ ದೋಣಿಯುವರು ತಮ್ಮ ನಾಯಕ ಕಲ್ಲಿನ ಪೆಟ್ಟು ತಿಂದು ಕೆಳಗೆ ಬಿದ್ದುದನ್ನು ನೋಡಿದೊಡನೆಯೇ ಎದೆಗುಂದಿ ಯುದ್ಧ ಮಾಡು ವುದನ್ನು ಬಿಟ್ಟು ಕಾಡಿನ ಕಡೆಗೆ ಪಲಾಯನಮಾಡಿದರು. ಆದರೆ ಒಬ್ಬನೂ ತಪ್ಪಿಸಿಕೊಳ್ಳಲಾಗಲಿಲ್ಲ. ಶತ್ರುಪಕ್ಷದವರು ಬೆನ್ನಟ್ಟಿ ಬಂದು ಎಲ್ಲರನ್ನೂ ಹೊಡೆದು ನೆಲಕ್ಕೆ ಉರುಳಿಸಿದರು. ಆದರೆ ಅವರೆಲ್ಲರೂ ಸಾಯಲಿಲ್ಲ. ಅವರ ಸೋಲು ಖಂಡಿತ ಎಂದು ನಿಶ್ಚಯವಾದ ಮೇಲೆ ಶತ್ರುಗಳು ಅವರನ್ನು ಕೊಲ್ಲದೆ ಸಾಧ್ಯವಾದಷ್ಟು ಮಟ್ಟಿಗೆ ಜೀವಸಹಿತ ಕೈಸೆರೆ ಹಿಡಿಯಬೇಕೆಂದೇ ಪ್ರಯತ್ನಮಾಡಿದಂತೆ ತೋರಿತು. ಹಾಗೆ ಹದಿನೈದು ಜನರು ಸೆರೆಸಿಕ್ಕಿದರು. ಹಗ್ಗಗಳಿಂದ ಕೈಕಾಲುಗಳನ್ನು ಭದ್ರವಾಗಿ ಬಿಗಿದು ಅವರನ್ನು ಹೊತ್ತುಕೊಂಡು ಹೋಗಿ ಕಾಡಿನ ಪೊದೆಗಳ ಬಳಿ ಮಲಗಿಸಿದರು. ಅವನ್ನು ಅಲ್ಲಿಯೇ ಬಿಟ್ಟು ಮತ್ತೆ ಯುದ್ಧರಂಗಕ್ಕೆ ಹಿಂತಿರುಗಿ ಗಾಯಗಳನ್ನು ತೊಳೆದುಕೊಳ್ಳುತ್ತಿದ್ದ ತಮ್ಮ ಸ್ನೇಹಿತರನ್ನು ಸೇರಿಕೊಂಡರು.

ಅಟ್ಟಿಸಿಕೊಂಡು ಬಂದ ಎರಡನೆಯ ದೋಣಿಯಲ್ಲಿ ಮೊದಲು ನಲವತ್ತು ಜನ ಕಿರಾತರಿದ್ದರು. ಯುದ್ಧ ಮುಗಿದ ಮೇಲೆ ಅವರ ಪೈಕಿ ಇಪ್ಪತ್ತೆಂಟು ಜನ ಮಾತ್ರ ಉಳಿದಿದ್ದರು. ಸೋತ ಪಕ್ಷದವರ ಕಡೆ ಮೊದಲೇ ಹೇಳಿದಂತೆ ಉಳಿದ ಹದಿನೈದು ಜನರನ್ನು ಕೈಕಾಲು ಕಟ್ಟಿ ಅಲುಗಾಡದಂತೆ ಕಾಡಿನಲ್ಲಿ ಬಿಟ್ಟಿದ್ದರು ಅವರೊಡನೆ ಬಂದಿದ್ದ ಹೆಂಗಸರು ಮಕ್ಕಳು ಮಾತ್ರ ಕಾಡಿನಲ್ಲಿ ಎಲ್ಲಿಯೋ ಅಡಗಿಕೊಂಡಿ ದ್ದರು. ಅವರನ್ನು ಹುಡುಕಿ ಕರೆತರುವುದಕ್ಕಾಗಿ ನಾಯಕನು ಇಬ್ಬರು ಯೋಧರನ್ನು ಕಳಿಸಿದನು.

ನಾವು ಮೂವರೂ ಒಬ್ಬರ ಮುಖವನ್ನೊಬ್ಬರು ನೋಡಿದೆವು. ಯುದ್ಧಮಾಡಿ ದಣಿದಿದ್ದ ಕಿರಾತರಲ್ಲಿ ಯಾರಾದರೂ ಬಾಯಾರಿ ಸಿಹಿ ನೀರು ಹುಡುಕಿಕೊಂಡು ಬಂದರೆ ನಾವು ಅವರ ಕೈಗೆ ಸಿಕ್ಕಿ ಬೀಳುವ ಸಂಭವವಿತ್ತು. ಆದರೆ ನಮ್ಮೆಲ್ಲರಿಗೂ ಅವರು ಏನು ಮಾಡುವರೋ ನೋಡಬೇಕೆಂಬ ಆಸಕ್ತಿ ಬಲವಾಗಿದ್ದುದರಿಂದ ಆ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಅಲ್ಲದೆ ನಾವೇನಾದರೂ ಅಲ್ಲಿಂದ ಎದ್ದರೆ ಕಿರಾತರ ಕಣ್ಣಿಗೆ

ಬೀಳಬಹುದೆಂಬ ಹೆದರಿಕೆಯೂ ಬಾಧಿಸುತ್ತಿತ್ತು.

ಒಬ್ಬ ಕಿರಾತ ಗುಂಪಿನಿಂದ ಹೊರಟು ಕಾಡಿನ ಕಡೆ ಹೋಗಿ ಸ್ವಲ್ಪ ಕಟ್ಟಿಗೆಯನ್ನು ಹೊತ್ತು ತಂದು ಅನಂತರ ಬಿಲ್ಲು ಬಾಣಗಳಿಂದ ಮರವನ್ನು ಕೊರೆದು ಬೆಂಕಿ ಹತ್ತಿಸಿದನು. ಅದನ್ನು ನೋಡಿ ನಮಗೆ ಆಶ್ಚರ್ಯವಾಯಿತು. ನಾವು ದ್ವೀಪಕ್ಕೆ ಬಂದ ದಿನ ಜಾಕಿ ಬೆಂಕಿ ಹತ್ತಿಸಿದ್ದೂ ಅದೇ ಉಪಾಯದಿಂದ. ಬೆಂಕಿ ಹತ್ತಿಕೊಂಡು ಚೆನ್ನಾಗಿ ಉರಿಯೆದ್ದ ಮೇಲೆ ಇಬ್ಬರು ಕಿರಾತರು ಎದ್ದು ಕಾಡಿನ ಕಡೆ ಹೋಗಿ ಸೆರೆ ಸಿಕ್ಕಿದ್ದವನೊಬ್ಬನನ್ನು ಹೊತ್ತುಕೊಂಡು ಬಂದರು. ಅವನನ್ನು ಬೆಂಕಿಯ ಹತ್ತಿರ ತಂದಾಗ ಜೀವಸಹಿತ ಸುಟ್ಟುಬಿಡುತ್ತಾರೆಯೋ ಏನೋ ಎಂಬ ಭಯದಿಂದ ನನ್ನ ಹೃದಯ ತಲ್ಲಣಿಸಿತು. ದೊಣ್ಣೆಯನ್ನೆತ್ತಿಕೊಂಡು ಅವನ ಸಹಾಯಕ್ಕೆ ನುಗ್ಗಬೇಕೆಂದಿದ್ದೆ. ಆದರೆ ಜಾಕಿ ಬಲವಾಗಿ ನನ್ನನ್ನು ಅದುಮಿ ಹಿಡಿದನು. ಮರುಕ್ಷಣದಲ್ಲೇ ಕಿರಾತನೊಬ್ಬ ಲಾಠಿಯಿಂದ ಹೊಡೆದು ಆ ಬಂದಿಯನ್ನು ಕೊಂದು ಹಾಕಿದನು. ನನ್ನ ಮನಸ್ಸಿನಲ್ಲಿ 'ಸದ್ಯಕ್ಕೆ ಆ ಬಡಪ್ರಾಣಿಯನ್ನು ಜೀವಸಹಿತ ಸುಡಲಿಲ್ಲವಲ್ಲ' ಎಂದು ಸ್ವಲ್ಪ ಸಂತೋಷವೇ ಆಯಿತು. ಆದರೂ ಆ ಕ್ರೌರ್ಯವನ್ನು ನೋಡಿ ನಾವು ಮೂವರಿಗೂ ಸ್ವಲ್ಪಕಾಲ ಪ್ರಜ್ಞೆ ತಪ್ಪಿತು.

ಇದ್ದಕ್ಕಿದ್ದ ಹಾಗೇ ಕಾಡಿನ ಕಡೆಯಿಂದ ಯಾರೋ ಭಯದಿಂದ ಚೀರಿದ ಸದ್ದು ಕೇಳಿ ನಮಗೆ ಮೂರ್ಛೆ ತಿಳಿಯಿತು. ಕಿರಾತರು ಕಾಡಿನಲ್ಲಿ ಅವಿತಿದ್ದ ಮೂರು ಜನ ಹೆಂಗಸರನ್ನೂ ಅವರ ಮಕ್ಕಳನ್ನೂ ಎಳೆದು ತಂದರು. ಅವರಲ್ಲಿ ಒಬ್ಬಳು ಇತರರಿಗಿಂತ ವಯಸ್ಸಿನಲ್ಲಿ ಚಿಕ್ಕವಳು. ಇತರರಂತೆ ಅವಳಿಗೂ ಮೂಗು ಚಪ್ಪಟೆಯಾಗಿ ತುಟಿಗಳು ದಪ್ಪನಾಗಿದ್ದರೂ ಆಕೆ ಪೂರ್ತಿ ಕಪ್ಪಾಗಿರದೆ ಸ್ವಲ್ಪ ಕಂದು ಬಣ್ಣದವಳಾಗಿದ್ದಳು. ಬೇರೆ ಜನಾಂಗಕ್ಕೆ ಸೇರಿದವಳಿರಬೇಕು. ಅವಳ ಮುಖ ನೋಡಿದರೆ ಬಹಳ ಲಜ್ಜಾಶೀಲಳಾಗಿಯೂ ಮೃದು ಸ್ವಭಾವದವಳಾಗಿಯೂ ಕಂಡಳು. ಅವರೆಲ್ಲರ ಕೂದಲೂ ನೀಳವಾಗಿರದೆ ಚಿಕ್ಕ ಮಕ್ಕಳ

ಕೂದಲಿನಂತೆ ಕಪ್ಪಾಗಿ ಗುಂಗುರುಗುಂಗುರಾಗಿತ್ತು.

ಆ ಬಡ ಹೆಂಗಸರಿಗೆ ಏನು ಚಿತ್ರಹಿಂಸೆ ಕೊಡುವರೋ ಎಂದು ಶಂಕೆಯಿಂದ ನಾವು ನೋಡುತ್ತಿರುವಾಗ ಕಿರಾತರ ನಾಯಕನು ಅವರ ಬಳಿಗೆ ಬಂದು ದೊಡ್ಡವಳೊಬ್ಬಳು ಕಂಕುಳಲ್ಲಿ ಎತ್ತಿಕೊಂಡಿದ್ದ ಮಗುವನ್ನು ಹಿಡಿದೆಳೆದನು. ತಾಯಿ ಭಯದಿಂದ ಕಿರಿಚುತ್ತ ಹಿಂದಕ್ಕೆ ಸರಿದಳು. ಆದರೆ ಕಿರಾತನು ವಿಕಟವಾಗಿ ನಗುತ್ತಾ ಮಗುವನ್ನು ಸೆಳೆದು ಕೊಂಡು ಅದನ್ನು ಕೊಂದುಹಾಕುವೆನೆನ್ನುವಂತೆ ಅವಳನ್ನು ಬೆದರಿಸಿ ಏನೋ ಮಾತಾಡಿದನು. ತಾಯಿ ಅಳುತ್ತ ನೆಲಕ್ಕೆ ಒರಗಿದ್ದನ್ನೂ ಮಗುವಿನ ಅಳುವನ್ನೂ ಕೇಳಿ ಜಾಕಿಗೆ ಬಹಳ ಸಂಕಟವಾಗಿರಬೇಕು. ಅವನು ಕಟಕಟನೆ ಹಲ್ಲು ಕಡಿದದ್ದು ಕೇಳಿಸಿತು.

ಅಷ್ಟು ಹೊತ್ತಿಗೆ ಕಂದು ಬಣ್ಣದ ಹುಡುಗಿಯನ್ನು ನಾಯಕನ ಬಳಿಗೆ ಎಳೆತಂದರು. ನಾಯಕನು ಮಗುವನ್ನು ನೆಲದ ಮೇಲೆ ಬಿಟ್ಟು ಅವಳನ್ನು ಬಹಳ ಕೋಪದಿಂದ ಏನೇನೋ ಪ್ರಶ್ನೆ ಮಾಡಿದನು. ಅವನ ಮಾತುಗಳೇನೋ ಸ್ಪಷ್ಟವಾಗಿ ಕೇಳುತ್ತಿದ್ದರೂ ಭಾಷೆಯ ಪರಿಚಯ ವಿಲ್ಲದ್ದರಿಂದ ನಮಗೆ ಏನೂ ಅರ್ಥವಾಗಲಿಲ್ಲ. ಆಕೆ ಅವನ ಮಾತಿಗೆ ಯಾವ ಉತ್ತರವನ್ನೂ ಕೊಡದೆ ಮೌನವಾಗಿದ್ದಳು. ನಾಯಕನು ಮತ್ತೆ ಮತ್ತೆ ಬೆಂಕಿಯ ಕಡೆಗೆ ಬೆರಳು ತೋರಿಸುತ್ತಿದ್ದುದನ್ನು ನೋಡಿದರೆ ಅವಳನ್ನು ಸುಟ್ಟುಬಿಡುವೆನೆಂದು ಹೆದರಿಸುತ್ತಿದ್ದಿರಬೇಕು.

ಜಾಕಿ ಪೀಟರಿನ ಅಂಗಿಯನ್ನು ಹಿಡಿದೆಳೆದು ಪಿಸುಮಾತಿನಲ್ಲಿ ಕೇಳಿದ: "ಪೀಟರ್, ನಿನ್ನ ಚೂರಿ ಜೇಬಿನಲ್ಲಿದೆಯೆ ?"

ಪೀಟರಿನ ಮುಖ ರಕ್ತವೇ ಇಲ್ಲದೆ ಶವದ ಮುಖದಂತೆ ಬಿಳಚಿ ಕೊಂಡಿತ್ತು. 'ಇದೆ' ಎಂದ.

"ಸರಿ ಹಾಗಾದರೆ. ಕಿರಾತರು ಆ ಬಡ ಹೆಂಗಸರಿಗೆ ಹಿಂಸೆ ಕೊಡುತ್ತಿರುವುದನ್ನು ನೋಡುತ್ತಾ ಸುಮ್ಮನೆ ಕುಳಿತಿರುವದಕ್ಕಾಗುವುದಿಲ್ಲ. ನಾನು ಹೇಳುವುದನ್ನು ಇಬ್ಬರೂ ಗಮನಿಸಿ. ಒಂದು ಕ್ಷಣವೂ ತಡಮಾಡದೆ ಕೆಲಸ ಮಾಡಬೇಕು. ನೀವಿಬ್ಬರೂ ಚೂರಿಯನ್ನು ತೆಗೆದುಕೊಂಡು ಬೇಗ ಪೊದೆಯ ಬಳಿ ಬಿದ್ದಿರುವ ಬಂದಿಗಳ ಬಳಿಗೆ ಓಡಿ

ಹೋಗಬೇಕು. ಅವರನ್ನು ಬಿಗಿದಿರುವ ಹಗ್ಗಗಳನ್ನು ನಿಮ್ಮ ಚೂರಿಯಿಂದ ತುಂಡು ಮಾಡಿ. ಬೇಗ, ಇಲ್ಲದಿದ್ದರೆ ಅನಾಹುತವಾದೀತು. ಬಗ್ಗಿಕೊಂಡು ಓಡಬೇಕು. ಕಿರಾತರ ಕಣ್ಣಿಗೆ ಬಿದ್ದೀರಿ.'' ಜಾಕಿಯ ಮೈ ಬೆವತು ಮುಖದ ಮೇಲೆ ಹನಿಗಳು ಇಳಿಯುತ್ತಿದ್ದವು. ಕೋಪದಿಂದ ಕಣ್ಣು ಕೆಂಡವಾಗಿ ಮೈಯೆಲ್ಲಾ ಅದುರುತ್ತಿತ್ತು. ನಮಗೆ ಅಷ್ಟು ಮಾತು ಹೇಳಿ ಒಡನೆಯೇ ಬಲವಾದ ಲಾಠಿಯೊಂದನ್ನು ತೆಗೆದುಕೊಂಡು ಮೇಲಕ್ಕೆದ್ದನು.

ಕಿರಾತನೊಬ್ಬ ತನ್ನ ನಾಯಕನ ಅಪ್ಪಣೆಯಂತೆ ಲಾಠಿ ಹಿಡಿದು ಆ ಹುಡುಗಿಯ ಬಳಿಗೆ ನುಗ್ಗುತ್ತಿದ್ದನು. ಅದೇ ಕ್ಷಣದಲ್ಲಿ ಜಾಕಿ ಭಯಂಕರವಾಗಿ ಗರ್ಜನೆ ಮಾಡಿದನು. ಬಂಡೆಬಂಡೆಗಳಿಂದಲೂ ಅದು ಮರುದನಿ ಕೊಟ್ಟುಕೊಂಡು ಬಂದಿತು. ಕೂಗು ಹಾಕುತ್ತಲೇ ಓಡಿ ಹೋಗಿ ಬಂಡೆಯ ತುದಿಯಿಂದ ಸುಮಾರು ಹದಿನೈದು ಅಡಿ ಕೆಳಗಿದ್ದ ಕಿರಾತರ ಮಧ್ಯಕ್ಕೆ ಒಂದೇ ನೆಗೆತ ನೆಗೆದು ಬಂದು ನಿಂತನು. ಕಣ್ಣು ಮುಚ್ಚಿಬಿಡುವಷ್ಟರಲ್ಲಿ ದೊಣ್ಣೆ ಹಿಡಿದಿದ್ದ ಕಿರಾತನಿಗೆ ಬಲವಾದ ಪೆಟ್ಟು ಕೊಟ್ಟು ಅವನನ್ನು ನೆಲಕ್ಕೆ ಉರುಳಿಸಿದನು. ಅದೇ ಕ್ಷಣದಲ್ಲೇ ನಾವು ಬಂದಿಗಳ ಬಳಿಗೆ ಓಡಿಹೋಗಿ ಹಗ್ಗಗಳನ್ನು ಕತ್ತರಿಸಿದೆವು.

ತನ್ನ ಎದುರಾಳಿ ಬಿದ್ದಮೇಲೆ ಜಾಕಿ ಕೆಂಡವನ್ನು ಕಾರುತ್ತ ಹಳದಿಯ ಕೂದಲಿನ ನಾಯಕನ ಮೇಲೆ ನುಗ್ಗಿದನು. ಅವನು ನಾಯಕನ ತಲೆಗೆ ಬೀಸಿದ ಪೆಟ್ಟೇನಾದರೂ ತಗಲಿದ್ದರೆ ಮತ್ತೊಂದು ಪೆಟ್ಟೇ ಅವಶ್ಯಕವಾಗುತ್ತಿರಲಿಲ್ಲ. ನಾಯಕನ ತಲೆ ಒಡೆದು ಚೂರಾಗಬೇಕಾಗಿತ್ತು. ಆದರೆ ಅವನದು ಬೆಕ್ಕಿನಂಥ ಚಟುವಟಿಕೆ; ಒಂದು ಕಡೆಗೆ ನೆಗೆದು ಆ ಏಟನ್ನು ತಪ್ಪಿಸಿಕೊಂಡು ಜಾಕಿಯ ತಲೆಗೆ ಗುರಿಯಿಟ್ಟು ತನ್ನ ಲಾಠಿಯನ್ನು ಬೀಸಿದನು. ಜಾಕಿಯೂ ಒಂದು ಪಕ್ಕಕ್ಕೆ ನೆಗೆದು ಏಟು ತಪ್ಪಿಸಿಕೊಂಡನು. ಮೊದಲು ಅವರ ಮಧ್ಯಕ್ಕೆ ಧುಮುಕಿದಾಗ ಜಾಕಿಗೆ ಕೋಪದ ಆವೇಶದಿಂದ ಪ್ರಜ್ಞೆಯೇ ಹೋದಂತಿತ್ತು. ನಾಯಕನೊಡನೇನಾದರೂ ಆ ಸ್ಥಿತಿಯಲ್ಲೇ ಯುದ್ಧ ಮಾಡಿದ್ದರೆ ಅವನು ಜಾಕಿಯನ್ನು ಸುಲಭವಾಗಿ ಹೊಡೆದುಹಾಕುತ್ತಿದ್ದನು. ಆದರೆ

ಜಾಕಿ ಬೇಗ ಮನಸ್ಸನ್ನು ಹದಕ್ಕೆ ತಂದುಕೊಂಡು ಶತ್ರುವಿನ ಚಲನ ವಲನಗಳನ್ನು ಜಾಗರೂಕನಾಗಿ ನೋಡಿಕೊಂಡು ಯುದ್ಧ ಮಾಡಲಾ ರಂಭಿಸಿದನು. ಅವನ ಏಟುಗಳು ಮಳೆಯ ಹನಿಗಳು ಬಡಿದಂತೆ ವೇಗ ವಾಗಿಯೂ ಬಲವಾಗಿಯೂ ಬಿದ್ದವು. ಅವನ ಲಾಠಿ ಕಿರಾತನದಕ್ಕಿಂತಲೂ ಹಗುರವಾಗಿದ್ದುದರಿಂದ ಅವನಿಗೆ ಹೆಚ್ಚು ಆಯಾಸವೂ ಆಗಲಿಲ್ಲ; ಕಿರಾತನ ಏಟುಗಳನ್ನು ಸುಲಭವಾಗಿ ತಪ್ಪಿಸಿಕೊಳ್ಳುವುದೂ ಸಾಧ್ಯ ವಾಯಿತು. ಆದರೆ ಅವನ ಹಗುರವಾದ ಲಾಠಿಯಿಂದ ಬಿದ್ದ ಏಟು ಗಳಲ್ಲಿ ಶಕ್ತಿ ಕಡಿಮೆ. ಕಿರಾತನಾದರೋ ಭಾರವಾದ ಲಾಠಿ ಯನ್ನು ಉಪಯೋಗಿಸಿದ್ದರಿಂದ ಬೇಗ ದಣಿಯುತ್ತ ಬಂದರೂ ಅವನ ಏಟುಗಳು ತಗಲಿದಾಗ ಬಹಳ ನೋವು ಮಾಡುತ್ತಿದ್ದವು.

ತಮ್ಮ ನಾಯಕನಿಗಿಂತ ಜಾಕಿ ಸಣ್ಣ ಆಳಾಗಿ ಕಂಡದ್ದರಿಂದ ಉಳಿದ ಕಿರಾತರೆಲ್ಲರೂ ನಾಯಕನ ಸಹಾಯಕ್ಕೆ ಬರದೆ ಇವರಿಬ್ಬರ ಯುದ್ಧವನ್ನು ನೋಡುತ್ತ ಸುಮ್ಮನೆ ನಿಂತಿದ್ದರು. ಐದು ನಿಮಿಷದೊಳಗೆ ಈ ಹೊಸಶತ್ರುವನ್ನು ನಾಯಕನು ತೀರಿಸಿಬಿಡುವನೆಂದು ಅವರ ಎಣಿಕೆ. ಇದರಿಂದಲೇ ಜಾಕಿಯ ಪ್ರಾಣ ಉಳಿದದ್ದು. ಅವರಿಗೇನಾದರೂ ತಮ್ಮ ನಾಯಕ ಸೋಲಬಹುದೆಂಬ ಸಂಶಯ ಬಂದಿದ್ದರೆ ಅರೆನಿಮಿಷದಲ್ಲಿ ಜಾಕಿಯ ಮೇಲೆ ಬಿದ್ದು ಅವನನ್ನು ಕೊಂದುಬಿಡುತ್ತಿದ್ದರು.

ಭಾರವಾದ ಆಯುಧವನ್ನು ಉಪಯೋಗಿಸಿದ್ದರಿಂದ ಎಷ್ಟು ಅನನುಕೂಲವೆಂದು ನಾಯಕನಿಗೆ ಸ್ಪಷ್ಟವಾಗುತ್ತ ಬಂತು. ಅವನ ಚಲನೆ ಕ್ರಮೇಣ ನಿಧಾನವಾಯಿತು. ಕಷ್ಟಪಟ್ಟು ಏದುಸಿರು ಎಳೆಯುವು ದಕ್ಕಾರಂಭಿಸಿದನು. ಅವನ ಪಡೆಯುವರು ಇದನ್ನು ಕಂಡು ಆಶ್ಚರ್ಯ ದಿಂದ ಅವನಿಗೆ ಸಹಾಯ ಮಾಡುವುದಕ್ಕೆ ಹತ್ತಿರ ಸರಿಯುತ್ತಿದ್ದರು. ಇದನ್ನು ನೋಡಿ ಜಾಕಿ ತನ್ನ ಹಣೆಯ ಬರಹ ತೀರಿತೆಂದು ದೃಢಮಾಡಿ ಕೊಂಡನು. ಆದರೂ ಧೈರ್ಯಗುಂದದೆ, ಶಕ್ತಿಯನ್ನೆಲ್ಲಾ ಬಿಟ್ಟು ಒಂದು ಪೆಟ್ಟು ಹಾಕಿ ಶತ್ರುವನ್ನು ಕೊಲ್ಲುವುದು, ಇಲ್ಲದಿದ್ದರೆ ಸಾಯು ವುದು ಎಂದುಕೊಂಡಿರಬೇಕು. ಕಿರಾತನು ಮತ್ತೆ ದೊಣ್ಣೆಯನ್ನು ಬೀಸು ತ್ತಿದ್ದನು. ಪಕ್ಕಕ್ಕೆ ನೆಗೆದು ಸುಲಭವಾಗಿ ಅದನ್ನು ತಪ್ಪಿಸಿಕೊಳ್ಳ

ಬಹುದಾಗಿತ್ತು. ಆದರೆ ಜಾಕಿ ಪಕ್ಕಕ್ಕೆ ಹಾರುವುದಕ್ಕೆ ಬದಲು ಏಟು ಬೀಳುವ ಮುನ್ನ ಹಠಾತ್ತಾಗಿ ನಾಯಕನ ಮೈಮೇಲೆಯೇ ನುಗ್ಗಿ, ತನ್ನ ಲಾಠಿಯನ್ನು ಮಧ್ಯದಲ್ಲಿ ಹಿಡಿದು, ಇದ್ದ ಬಲವನ್ನೆಲ್ಲಾ ಪ್ರಯೋಗಿಸಿ ಶತ್ರುವಿನ ಹಣೆಯ ಮಧ್ಯಕ್ಕೆ ಸರಿಯಾಗಿ ಪೆಟ್ಟು ಕೊಟ್ಟನು. ಏಟಿನ ರಭಸಕ್ಕೆ ಜಾಕಿಯೇ ಕೆಳಗೆ ಬಿದ್ದನು. ಅವನ ಮೈಮೇಲೆ ಕಿರಾತರ ನಾಯಕನೂ ಬಿದ್ದನು.

ಕೂಡಲೇ ಜಾಕಿಯನ್ನು ತೀರಿಸಿಬಿಡಬೇಕೆಂದು ಹತ್ತು ಹನ್ನೆರಡು ಜನ ಕಿರಾತರು ಲಾಠಿಗಳನ್ನೆತ್ತಿದರು. ಆದರೆ ಜಾಕಿಯ ಶರೀರವು ನಾಯಕನ ಶರೀರದಿಂದ ಮುಚ್ಚಿಹೋಗಿದ್ದುದರಿಂದ ಅವರು ಒಂದು ನಿಮಿಷ ಕೈತಡೆಯಬೇಕಾಯಿತು. ಆ ಒಂದು ನಿಮಿಷವೇ ಜಾಕಿಯ ಪ್ರಾಣವನ್ನು ಕಾಪಾಡಿತು. ಅಷ್ಟು ಹೊತ್ತಿಗೆ ನಾವು ಬಂಧನದಿಂದ ಬಿಡಿಸಿದ ಕಿರಾತರು ಲಾಠಿ ಹಿಡಿದು ತಮ್ಮ ಶತ್ರುಗಳ ಮೇಲೆ ಬಿದ್ದರು. ಕಿರಾತರು ತಮ್ಮ ನಾಯಕನನ್ನು ಎತ್ತಿ ಬೇರೆ ಕಡೆ ಮಲಗಿಸುವುದರೊಳಗೆ ಅವರಲ್ಲಿ ಏಳು ಜನ ಪೆಟ್ಟು ತಿಂದು ಕೆಳಗೆ ಬಿದ್ದುಹೋದರು. ನಾನೂ ಪೀಟರನೂ ಇನ್ನಿಬ್ಬರನ್ನು ಉರುಳಿಸಿದೆವು. ಕಿರಾತರು ತಮ್ಮ ನಾಯಕನಿಗೂ ಜಾಕಿಗೂ ನಡೆಯುತ್ತಿದ್ದ ಯುದ್ಧವನ್ನು ನೋಡುವುದರಲ್ಲಿ ಮಗ್ನರಾಗಿದ್ದುದರಿಂದ ಅವರಿಗೆ ಬೇರೆ ಕಡೆ ಗಮನವೇ ಇರಲಿಲ್ಲ. ತಾವು ಕಟ್ಟಿ ಹಾಕಿದ್ದ ಶತ್ರುಗಳು ಮತ್ತೆ ತಮ್ಮ ಮೇಲೆ ಬೀಳಬಹುದೆಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ. ಅದರಿಂದಲೇ ನಮ್ಮ ಕೆಲಸ ಅಷ್ಟು ಸುಲಭವಾಯಿತು. ಅಷ್ಟು ಜನ ಬಿದ್ದ ಮೇಲೂ ಅವರಲ್ಲಿ ನಮ್ಮ ಪಕ್ಷದವರಿಗಿಂತ ಮೂರು ಜನ ಹೆಚ್ಚಾಗಿದ್ದರು. ಆದರೆ ಇದ್ದಕ್ಕಿದ್ದ ಹಾಗೇ ಇಷ್ಟೊಂದು ಜನ ಅನಿರೀಕ್ಷಿತವಾಗಿ ಮೇಲೆ ಬಿದ್ದುದರಿಂದ ಅವರಿಗೆ ಕಕಮಕ ಹಿಡಿದಿತ್ತು. ನಾವಾದರೋ ಒಂಬತ್ತು ಜನರನ್ನು ಬಲಿ ತೆಗೆದುಕೊಂಡು ಉತ್ಸಾಹದಿಂದ ಉಕ್ಕುತ್ತಿದ್ದೆವು. ಅದರ ಮೇಲೆ ಅವರ ಕಡೆಯ ನಾಯಕ ಬಿದ್ದು ಹೋದುದರಿಂದ ಅವರ ಧೈರ್ಯ ಕುಗ್ಗಿತು. ಅಷ್ಟರಲ್ಲೇ ಜಾಕಿ ಕಿರಾತ ನಾಯಕನನ್ನು ಒತ್ತರಿಸಿ ಎದ್ದು ಹುಚ್ಚು ಹಿಡಿದವನಂತೆ ಯುದ್ಧಮಾಡಿ, ಒಂದು ನಿಮಿಷದೊಳಗೆ ಮೂವರು

ಶತ್ರುಗಳನ್ನು ನೆಲಸಮ ಮಾಡಿದನು. ಈಗ ಎರಡು ಪಕ್ಷದಲ್ಲಿಯೂ ಸಂಖ್ಯೆ ಒಂದೇ ಸಮನಾಯಿತು. ಜಾಕಿಗೆ ಬೆಂಬಲವಾಗಿ ನಾನೂ ಪೀಟರನೂ ನಮ್ಮ ಪಕ್ಷದ ಕಿರಾತರೂ ನಿಂತಮೇಲೆ ಕಾಲು ಘಂಟೆಯೊಳಗಾಗಿ ಶತ್ರುಗಳೆಲ್ಲರೂ ಪೆಟ್ಟು ತಿಂದು ಬಿದ್ದರು, ಇಲ್ಲವೆ ಕೈಸೆರೆಯಾದರು. ಅವರೆಲ್ಲರ ಕೈಕಾಲುಗಳನ್ನೂ ಕಟ್ಟಿಹಾಕಿ ಸಾಲಾಗಿ ಅಲ್ಲಿಯೇ ಉರುಳಿಸಿದೆವು.

## ೯

## ಕಿರಾತರನ್ನು ಸಾಗಕಳಿಸಿದ್ದು

ಯುದ್ಧ ಮುಗಿದಮೇಲೆ ನಮ್ಮ ಕಡೆಯ ಕಿರಾತರೆಲ್ಲರೂ ಆಶ್ಚರ್ಯದಿಂದ ನಮ್ಮ ಸುತ್ತ ಬಂದು ನಿಂತು ಪ್ರಶ್ನೆಗಳ ಸುರಿಮಳೆ ಕರೆದರು. ಅವರ ಭಾಷೆ ನಮಗೆ ಏನೇನೂ ಗೊತ್ತಾಗಲಿಲ್ಲವಾದ್ದರಿಂದ ನಾವು ಉತ್ತರ ಕೊಡುವಂತಿರಲಿಲ್ಲ. ನಾವು ಉತ್ತರ ಕೊಟ್ಟಿದ್ದರೂ ಅವರಿಗೆ ಅರ್ಥವಾಗುತ್ತಿರಲಿಲ್ಲ. ನಾವು ಅವರ ಸ್ನೇಹಿತರೆಂದು ಭರವಸೆ ಕೊಡಬೇಕಾಯಿತು. ಆ ವೇಳೆಗೆ ಮೊದಲನೆಯ ದೋಣಿಯ ನಾಯಕನು ಸ್ವಲ್ಪ ವಿಶ್ರಾಂತಿ ಪಡೆದು ಸುಧಾರಿಸಿಕೊಂಡು ನಿಂತಿದ್ದನು. ಜಾಕಿ ಅವನ ಬಳಿಗೆ ಹೋಗಿ ಸ್ನೇಹಭಾವದಿಂದ ಅವನ ಕೈಹಿಡಿದು ಚೆನ್ನಾಗಿ ಕುಲುಕಿದನು. ಜಾಕಿಯ ನಗುಮುಖವನ್ನೂ ಅವನ ನಡೆವಳಿಕೆಯನ್ನೂ ನೋಡಿ ಅವನ ಉದ್ದೇಶ ಅವರೆಲ್ಲರಿಗೂ ಅರ್ಥವಾಗಿರಬೇಕು. ಕೂಡಲೆ ಅವರೆಲ್ಲ ಹತ್ತಿರ ಬಂದು ನಮ್ಮೆಲ್ಲರ ಕೈಯನ್ನೂ ಕುಲುಕಿದರು. ಇದು ನಡೆಯುತ್ತಿದ್ದಾಗ ಶತ್ರುಪಕ್ಷದ ನಾಯಕನ ಕೋಪಕ್ಕೆ ತುತ್ತಾಗಿದ್ದ ಕಂದು ಬಣ್ಣದ ಹುಡುಗಿ ಹತ್ತಿರದಲ್ಲೇ ಇದ್ದ ಬಂಡೆಯೊಂದರ ಮೇಲೆ ಕುಳಿತು ನಡೆದದ್ದೆಲ್ಲವನ್ನೂ ನೋಡುತ್ತಿದ್ದಳು, ತನ್ನ ಹಿಂದೆ ಬರಬೇಕೆಂದು ಜಾಕಿ ಅವಳಿಗೆ ಸನ್ನೆ ಮಾಡಿ, ನಾಯಕನ ಕೈಹಿಡಿದುಕೊಂಡು ನಮ್ಮ ಗುಡಿಸಲಿನ ಕಡೆ ಹೊರಡುವುದರಲ್ಲಿದ್ದನು. ಅಷ್ಟರಲ್ಲೇ ನೆಲದ ಮೇಲೆ ಮಲಗಿದ್ದ ಮಗುವಿನ ಮೇಲೆ ಕಣ್ಣು ಬಿತ್ತು. ನಾಯಕನ ಕೈ ಬಿಟ್ಟು ಮಗುವನ್ನು ಎತ್ತಿಕೊಂಡು ನೋಡಿದನು. ಯುದ್ಧ ನಡೆಯು

ತ್ತಿದ್ದಾಗ ದೇವರ ದಯದಿಂದ ಅದು ಯಾರ ಕಾಲಿಗೂ ಸಿಕ್ಕಿರಲಿಲ್ಲ; ಸುಖವಾಗಿತ್ತು. ತನ್ನ ಮಗುವಿನ ಆಸೆ ತೀರಿತೆಂದು ಮೂರ್ಛೆ ಹೋಗಿದ್ದ ಆ ಮಗುವಿನ ತಾಯಿಯು ಕಣ್ಣು ತೆರೆದು ದಿಗ್ಭ್ರಮೆ ಹಿಡಿದವಳಂತೆ ಸುತ್ತಲೂ ನೋಡುತ್ತಿದ್ದಳು.

"ಎಲ್ಲಿ, ದಾರಿ ಬಿಡಿ. ನಾನು ಆಕೆಯನ್ನು ಸುಧಾರಿಸುತ್ತೇನೆ." ಎಂದು ಜಾಕಿ ನಮ್ಮೆಲ್ಲರನ್ನೂ ಒಂದು ಕಡೆಗೆ ತಳ್ಳಿ ಅವಳ ಬಳಿಗೆ ಹೋಗಿ ಸಮಾಧಾನಪಡಿಸಲು ಯತ್ನಿಸಿದನು. ಮಗುವನ್ನು ಆಕೆಯ ಮಡಿಲಿನಲ್ಲಿಟ್ಟು ಅದರ ಕೆನ್ನೆಯನ್ನು ತಾಯಿಯ ಕೆನ್ನೆಗೆ ಸೋಕಿಸಿದ ಕೂಡಲೆ ಆಕೆಗೆ ಚೈತನ್ಯ ಬಂತು. ಆನಂದದಿಂದ ಕೂಗಿಕೊಳ್ಳುತ್ತಾ ಮಗುವನ್ನು ಪದೇ ಪದೇ ಎದೆಗೆ ಅಪ್ಪಿಕೊಂಡಳು ಶತ್ರುಗಳೆಲ್ಲಾ ನಾಶವಾಗಿದ್ದರೆನ್ನುವುದು ಅವಳ ಮನಸ್ಸಿಗೆ ಇನ್ನೂ ನಾಟಿರಲಿಲ್ಲವೇನೊ. ಒಂದು ನಿಮಿಷವಾದ ಮೇಲೆ ಏನೋ ನೆನಪು ಮಾಡಿಕೊಂಡವಳಂತೆ ತಟ್ಟನೆ ಎದ್ದು ಮಗುವಿನೊಡನೆ ಕಾಡಿನ ಕಡೆಗೆ ಓಡುವ ಯತ್ನ ಮಾಡಿದಳು. ಆದರೆ ಜಾಕಿ "ಇನ್ನೇನೂ ಭಯವಿಲ್ಲ. ನಾವೆಲ್ಲರೂ ಸ್ನೇಹಿತರು" ಎನ್ನುವಂತೆ ಸನ್ನೆಮಾಡಿ ಆಕೆಗೆ ಧೈರ್ಯ ಕೊಟ್ಟನು.

"ರೋವರ್, ಪೀಟರ್, ನೀವಿಬ್ಬರೂ ಇವರನ್ನೆಲ್ಲಾ ಕರೆದುಕೊಂಡು ಬನ್ನಿ. ಗುಡಿಸಲ ಬಳಿಗೆ ಹೋಗೋಣ. ಈ ಬಡಪಾಯಿಗಳು ಬಹಳ ಹಸಿದಿರಬೇಕು. ಅವರಿಗೆ ಏನಾದರೂ ಆಹಾರ ಕೊಡೋಣ." ಎಂದು ಹೇಳಿ ನಾಯಕನ ಕೈಹಿಡಿದುಕೊಂಡು ಹೊರಟನು.

ಹತ್ತು ನಿಮಿಷಗಳಲ್ಲೇ ನಮ್ಮ ಗುಡಿಸಲನ್ನು ತಲಪಿ ಕಿರಾತರೆಲ್ಲರನ್ನೂ ಅದರ ಮುಂದೆ ಅರ್ಧಚಂದ್ರಾಕಾರವಾಗಿ ಕೂರಿಸಿ ಅವರ ಮುಂದೆ ಗೆಣಸು, ಟಾರೊ, ತೆಂಗಿನಕಾಯಿ, ಮೀನು, ಹಣ್ಣುಗಳು, ಮುಂತಾದ್ದನ್ನು ತಂದಿಟ್ಟೆವು. ಅವರಿಗೆ ಈ ಬಗೆಯ ಆಹಾರ ಚೆನ್ನಾಗಿ ಅಭ್ಯಾಸವಾಗಿದ್ದಿರಬೇಕು. ಎಲ್ಲರೂ ಬಹಳ ಸಂತೋಷದಿಂದ ಊಟ ಮಾಡಿ ಹಸನ್ಮುಖಿಗಳಾಗಿ ಕುಳಿತರು.

ಎಲ್ಲರಿಗೂ ಬಹಳ ಆಯಾಸವಾಗಿದ್ದರಿಂದ ಸೂರ್ಯ ಮುಳುಗುತ್ತಿದ್ದ ಹಾಗೆಯೇ ಮಲಗಿದೆವು. ನನಗಂತೂ ಮಲಗಿದ ಕೂಡಲೇ

ನಿದ್ದೆ ಬಂತು. ನಮಗಿಂತಲೂ ಹೆಚ್ಚು ದಣಿದಿದ್ದ ಕಿರಾತರೂ ಬೇಗ ನಿದ್ದೆ ಮಾಡಿರಬೇಕು. ಎಷ್ಟು ಹೊತ್ತು ಮಲಗಿದ್ದೆವೋ ತಿಳಿಯದು. ನನಗೆ ಎಚ್ಚರವಾದಾಗ ಸೂರ್ಯನು ಆಗಲೇ ಅಂತರಿಕ್ಷದಲ್ಲಿ ಸ್ವಲ್ಪ ದೂರ ಪ್ರಯಾಣ ಮಾಡಿದ್ದನು. ನಾನು ಜಾಕಿಯನ್ನು ಎಬ್ಬಿಸಿದಾಗ ಅವನು ಸ್ವಲ್ಪ ಹೆದರಿದವನಂತೆ ನೆಗೆದನು. ಒಂದು ಕ್ಷಣವಾದ ಮೇಲೆ ಹಿಂದಿನ ದಿನದ ಘಟನೆಗಳನ್ನೆಲ್ಲಾ ಜ್ಞಾಪಿಸಿಕೊಂಡು ಪೀಟರನ್ನೂ ಎಬ್ಬಿಸಿದನು.

"ಏಳು, ಏಳು. ಬೆಳಗಿನ ತಿಂಡಿಯ ಯೋಚನೆಯೂ ಬೇಡವೆ? ಲೋ, ಪೀಟರ್, ಸೋಮಾರಿ, ಎಷ್ಟು ಹೊತ್ತೋ ಮೈಗಳ್ಳನಾಗಿ ಬಿದ್ದಿರುವುದು!"

ಪೀಟರ್ ಕಣ್ಣು ಹೊಸಕಿಕೊಂಡು ಎದ್ದು ಮಂಕು ಮಂಕಾಗಿ ಸುತ್ತ ನೋಡಿದನು.

"ಎಲ ಎಲಾ, ಆಗಲೇ ನಾಳೆ ಬಂದು ಬಿಟ್ಟಿದೆ! ನಾನು ಇನ್ನೂ ಇವೊತ್ತು ಅಂದುಕೊಂಡಿದ್ದೆ!" ಎನ್ನುವ ಹೊತ್ತಿಗೆ ಗುಡಿಸಲ ಮುಂದಿನ ಬಂಡೆಯ ಮೇಲೆ ಮಗುವನ್ನು ತೊಡೆಯಮೇಲೆ ಕೂರಿಸಿಕೊಂಡು ಹಣ್ಣು ತಿನ್ನುತ್ತಿದ್ದ ಕಿರಾತಿನಿ ಕಣ್ಣಿಗೆ ಬಿದ್ದಳು. "ನೀನೆಲ್ಲಿಂದ ವಕ್ರಿಸಿದೆ ಮಾರಾಯತಿ? ಯಾರು ಔತನ ಕೊಟ್ಟಿದ್ದರಮ್ಮ ನಿನಗೆ? ಪರವಾಯಿಲ್ಲ! ಸ್ವಂತ ಮನೇಲಿದ್ದ ಹಾಗೇ ನಿಸ್ಸಂಕೋಚವಾಗಿ ಫಲಾ ಹಾರಕ್ಕೆ ಕೂತುಬಿಟ್ಟಿದೀ" ಎಂದುಕೊಂಡು ಮೇಲಕ್ಕೆದ್ದನು.

ಉಳಿದ ಕಿರಾತರೂ ಅಷ್ಟುಹೊತ್ತಿಗೆ ಎದ್ದರು. ಎಲ್ಲರಿಗೂ ತಿಂಡಿಯಾದ ಮೇಲೆ ನಾವು ಮತ್ತೆ ಅವರೊಡನೆ ಸನ್ನೆಯಿಂದ ಮಾತಾಡುವ ಪ್ರಯತ್ನ ಮಾಡಿದೆವು. ಆದರೆ ಅದರಿಂದ ಹೆಚ್ಚು ಪ್ರಯೋಜನವಾಗಲಿಲ್ಲ. ಜಾಕಿ ಸ್ವಲ್ಪ ಯೋಚನೆ ಮಾಡಿ ಒಂದು ಉಪಾಯ ಕಂಡು ಹಿಡಿದನು. ನಾಯಕನೆದುರಿಗೆ ನಿಂತು, ತನ್ನ ಎದೆಯಮೇಲೆ ಕೈಯಿಟ್ಟು ಕೊಂಡು ಸ್ಪಷ್ಟವಾಗಿ ಮೂರು ಸಾರಿ "ಜಾಕಿ, ಜಾಕಿ, ಜಾಕಿ," ಎಂದು ಹೇಳಿ, ಆ ಮೇಲೆ ನನ್ನ ಕಡೆಗೂ ಪೀಟರಿನ ಕಡೆಗೂ ಕೈ ತೋರಿಸಿ ನಮ್ಮ ಹೆಸರುಗಳನ್ನೂ ಹೇಳಿ ಪುನಃ ತನ್ನ ಕಡೆಗೇ ತೋರಿಸಿಕೊಂಡು 'ಜಾಕಿ'

ಎಂದನು. ಅನಂತರ ನಾಯಕನ ಎದೆಯ ಮೇಲೆ ಕೈಯಿಟ್ಟು " ನಿನ್ನ ಹೆಸರೇನು ? " ಎನ್ನುವಂತೆ ಪ್ರಶ್ನೆಯ ಸನ್ನೆ ಮಾಡಿದನು. ಕಿರಾತನಿಗೆ ಜಾಕಿಯ ಉದ್ದೇಶ ಅರ್ಥವಾಯಿತು. " ಟರಾರ, ಟರಾರ, " ಎಂದು ಎರಡು ಸಲ ತನ್ನ ಹೆಸರು ಹೇಳಿದನು. ಜಾಕಿ ತಾನೂ ಅವನ ಹೆಸರನ್ನು 'ಟರಾರ' ಎಂದು ಉಚ್ಚರಿಸಿದಾಗ ಅವನು ಬಹಳ ಸಂತೋಷದಿಂದ ತಲೆದೂಗಿ " ಚಕ್ " ಎಂದನು. ಅದನ್ನು ಕೇಳಿ ಪೀಟರ್ ಗಟ್ಟಿಯಾಗಿ ನಕ್ಕುಬಿಟ್ಟನು. ಆದರೆ ಜಾಕಿ ಅವನ ಕಡೆ ತಿರುಗಿ " ಪೀಟರ್, ನನಗೆ ಈಗ ಬಂದಿರುವುದಕ್ಕಿಂತ ಹೆಚ್ಚು ಕೋಪ ತೋರಿಸಬೇಕಾಗಿದೆ. ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ಅವನನ್ನು ಹಾಸ್ಯಮಾಡಿ ನಕ್ಕರೆ ಅವನು ಏನು ತಿಳಿದುಕೊಂಡಾನು ! ಸುಮ್ಮನಿರು." ಎಂದು ಗದರಿಸಬೇಕಾಯಿತು. ಅನಂತರ ಜಾಕಿ ನಮ್ಮ ಗುಡಿಸಲಿನ ಬಾಗಿಲ ಹತ್ತಿರ ಕುಳಿತಿದ್ದ ಎಣ್ಣೆಗೆಂಪಿನ ಹುಡುಗಿಯ ಕಡೆ ಬೆರಳು ತೋರಿಸಿ ಮತ್ತೆ ಪಶ್ನಾರ್ಥಕವಾದ ಸನ್ನೆ ಮಾಡಿದನು. ನಾಯಕ " ಆವತಿ " ಎಂದನು.

ಜಾಕಿ ತನ್ನ ಕೊಡಲಿಯನ್ನು ತೆಗೆದುಕೊಂಡು ಕಿರಾತರಿಗೆಲ್ಲಾ ತನ್ನನ್ನು ಹಿಂಬಾಲಿಸಬೇಕೆಂದು ಸನ್ನೆ ಮಾಡಿ, ಹಿಂದಿನ ಯುದ್ಧ ನಡೆದ ಸ್ಥಳಕ್ಕೆ ಹೋದನು. ನಮ್ಮ ಅತಿಥಿಗಳನ್ನು ಆದರಿಸುವ ಸಡಗರದಲ್ಲಿ ನಾವು ಕೈಕಾಲು ಕಟ್ಟಿಹಾಕಿದ್ದ ಬಂದಿಗಳ ವಿಷಯವೇ ಮರೆತು ಹೋಗಿತ್ತು. ಅವರೂ ರಾತ್ರಿ ಚೆನ್ನಾಗಿ ನಿದ್ದೆ ಮಾಡಿದ್ದಿರಬೇಕು. ಬಹಳ ಹಸಿದಿದ್ದರೆಂದು ಕಾಣುತ್ತದೆ; ನಾವು ಕೊಟ್ಟ ತಿಂಡಿಯನ್ನು ಆತುರದಿಂದ ಗವಗವನೆ ತಿಂದರು.

ಆ ಮೇಲೆ ಜಾಕಿ ಮರಳಿನಲ್ಲಿ ಗುಂಡಿ ತೋಡುವುದಕ್ಕೆ ಮೊದಲು ಮಾಡಿದನು. ಒಂದೆರಡು ನಿಮಿಷ ಕೆಲಸಮಾಡಿದ ನಂತರ ಕಿರಾತರ ಕಡೆ ತಿರುಗಿ ಮೊದಲು ಯುದ್ಧದಲ್ಲಿ ಸತ್ತು ಬಿದ್ದಿದ್ದವರ ಹೆಣಗಳನ್ನೂ ಅನಂತರ ಗುಂಡಿಯನ್ನೂ ತೋರಿಸಿದನು. ಕಿರಾತರು ಅವನ ಅಭಿಪ್ರಾಯವನ್ನು ಕೂಡಲೆ ಅರ್ಥಮಾಡಿಕೊಂಡು ಅರ್ಧಘಂಟೆಯೊಳಗಾಗಿ ಹೆಣಗಳೆಲ್ಲಾ ಹಿಡಿಸುವಂತೆ ದೊಡ್ಡದಾಗಿ ಹಳ್ಳ ತೆಗೆದರು. ತಮ್ಮ ಶತ್ರು

ಗಳನ್ನು ಹೂಳುವಾಗ ಅವರು ಯಾವ ವಿಧವಾದ ಮರ್ಯಾದೆಯನ್ನೂ ತೋರಿಸದೆ ಬೇಕಾಬಿಟ್ಟಿಯಾಗಿ ಹಳ್ಳದೊಳಕ್ಕೆ ಎಸೆದರು. ನಾವು ಎದುರಿಗೆ ನಿಂತು ಆ ಕೆಲಸ ಮಾಡಿಸದಿದ್ದರೆ ಅವರು ಆ ವಿಷಯದಲ್ಲಿ ತೊಂದರೆಯನ್ನೇ ತೆಗೆದುಕೊಳ್ಳುತ್ತಿರಲಿಲ್ಲ. ಕೊಳೆತು ಹದ್ದುಗಳ ಪಾಲಾಗಲೆಂದು ಶವಗಳನ್ನು ಹಾಗೇ ಬಿಟ್ಟು ಬಿಡುತ್ತಿದ್ದರು. ಹಳದಿಯ ಕೂದಲಿನ ನಾಯಕನನ್ನೇ ಕೊನೆಯಲ್ಲಿ ಹೂಳಿದರು. ಆ ಬಡಪಾಯಿ ಜಾಕಿಯ ಏಟಿನಿಂದ ಜ್ಞಾನ ತಪ್ಪಿ ಬಿದ್ದಿದ್ದನೇ ಹೊರತು ಸತ್ತಿರಲಿಲ್ಲ. ಆದರೆ ಯುದ್ಧ ನಡೆಯುತ್ತಿದ್ದಾಗ ಅವನು ಮೇಲಕ್ಕೇಳುವುದನ್ನು ನೋಡಿ ಶತ್ರುಪಕ್ಷದವನೊಬ್ಬನು ಮತ್ತೊಂದು ಏಟುಕೊಟ್ಟು ಅವನನ್ನು ಕೊಂದುಹಾಕಿದನು.

ಕಿರಾತರ ದೋಣಿ ಬಲವಾಗಿ ದಡಕ್ಕೆ ತಗಲಿದ್ದರಿಂದ ಸ್ವಲ್ಪ ಕೆಟ್ಟು ಹೋಗಿತ್ತು. ಅದನ್ನು ಸರಿಮಾಡುವುದಕ್ಕೆ ಮೂರುನಾಲ್ಕು ದಿನ ಹಿಡಿಯಿತು. ಅದು ಸಿದ್ಧವಾದಮೇಲೆ ನಾವೂ ಸಹಾಯ ಮಾಡಿ ಬಂದಿಗಳನ್ನು ದೋಣಿಗೆ ಸಾಗಿಸಿದ್ದಲ್ಲದೆ ಕಿರಾತರಿಗೆ ಒಂದೆರಡು ದಿನಕ್ಕೆ ಬೇಕಾಗುವಷ್ಟು ಆಹಾರ ಪದಾರ್ಥಗಳನ್ನೂ ಶೇಖರಿಸಿ ಅದನ್ನು ದೋಣಿಯಲ್ಲಿಟ್ಟೆವು. ಹೊರಡುವ ದಿನ ಟೆರಾರನು ನಮಗೆ ಏನೇನೋ ಸನ್ನೆ ಮಾಡಿ ಮಾತಾಡಿದನು. ನಾವು ಅವನ ಅರ್ಥವನ್ನು ಗ್ರಹಿಸುವುದಕ್ಕೆ ಬಹಳ ಹೊತ್ತು ಹಿಡಿಯಿತು. ನಾವೂ ಅವನ ಜೊತೆಯಲ್ಲೇ ಪ್ರಯಾಣ ಮಾಡಿ ಅವನ ದ್ವೀಪದಲ್ಲಿ ವಾಸಮಾಡಲೆಂದೇ ಅವನ ಮಾತಿನ ಸಾರಾಂಶ. ಆದರೆ ನಮಗೆ ನಮ್ಮ ದ್ವೀಪವನ್ನು ಬಿಟ್ಟು ಹೋಗುವ ಉದ್ದೇಶವಿರಲಿಲ್ಲವಾದ್ದರಿಂದ ತಲೆ ಅಲ್ಲಾಡಿಸಿಬಿಟ್ಟೆವು. ನಮ್ಮ ಗುರುತಿಗಾಗಿ ಒಂದು ಮರದ ಚೂರಿನ ಮೇಲೆ ನಮ್ಮ ಹೆಸರುಗಳನ್ನು ಕೆತ್ತಿ ಕೊಟ್ಟೆವು.

ನೀರಿನ ಬಳಿಗೆ ಬಂದ ಮೇಲೆ ನಾವು ಅವರೆಲ್ಲರೊಡನೆಯೂ ಕೈಕುಲುಕಿ ಸಾಗಕಳಿಸಿದೆವು. ಆದರೆ ಹೊರಡುವುದಕ್ಕೆ ಮುಂಚೆ ಟೆರಾರನು ಜಾಕಿಯ ಹತ್ತಿರ ಬಂದು ಅವನ ಮೂಗಿನ ಮೇಲೆ ತನ್ನ ಮೂಗನ್ನು ಉಜ್ಜಿ, ಅನಂತರ ನಮಗೂ ಹಾಗೇ ಮಾಡಿದನು. ನಮ್ಮಲ್ಲಿ

ಕೈಕುಲುಕುವ ಪದ್ಧತಿಯಿರುವ ಹಾಗೆ ಅವರಲ್ಲಿ ಮೂಗು ಉಜ್ಜುವ ಪದ್ಧತಿಯಿರಬೇಕು. ಅದಕ್ಕೆ ಮರ್ಯಾದೆ ಸಲ್ಲಿಸಬೇಕೆಂದು ನಾವೂ ಅವರೆಲ್ಲರೊಡನೆಯೂ ಮೂಗು ಉಜ್ಜಿದ್ದಾಯಿತು. ಎಲ್ಲರೂ ದೋಣಿಯಲ್ಲಿ ಕುಳಿತು ಹೊರಟರು. ನಾವು ದಡದಲ್ಲಿಯೇ ಕುಳಿತು ಒಂದು ಘಂಟೆಯ ಕಾಲ ದೋಣಿಯನ್ನೇ ನೋಡುತ್ತಿದ್ದೆವು. ಅಷ್ಟು ಹೊತ್ತಿಗೆ ಅದು ಕಣ್ಮರೆಯಾಯಿತು. ನಮ್ಮಂತೆಯೇ ಮನುಷ್ಯರಾದವರ ಸಹವಾಸ ದೊರಕಿದ್ದು ಮತ್ತೆ ಕಳೆದುಹೋಯಿತಲ್ಲ ಎಂದು ನಮ್ಮ ಮನಸ್ಸಿನಲ್ಲಿ ಆ ದಿನವೆಲ್ಲಾ ವ್ಯಸನ.

## ೧೦

## ಕರಿಯಬಾವುಟದ ಹಡಗು

ಮತ್ತೆ ನಮ್ಮ ಜೀವನ ಎಂದಿನಂತೆ ನಾಗಿತು. ಕಿರಾತರು ಹೊರಟು ಹೋದ ಮೇಲೆ ಎರಡು ಮೂರು ತಿಂಗಳು ಕಳೆದಿತ್ತು. ಒಂದು ದಿನ ಮೀನು ಹಿಡಿಯಲು ಹೋಗಬೇಕೆಂದು ಏರ್ಪಾಡುಮಾಡಿಕೊಂಡು ಅದಕ್ಕೆ ಮುಂಚೆ ನಾನೂ ಜಾಕಿಯೂ ಸ್ನಾನಕ್ಕೆ ಇಳಿದಿದ್ದೆವು. ಪೀಟರ್ ದಡದ ಮೇಲೆ ಕುಳಿತಿದ್ದನು. ಇದ್ದಕ್ಕಿದ್ದ ಹಾಗೆಯೇ ಅವನು ಮೇಲಕ್ಕೆ ನೆಗೆದು ಮನಸ್ಸಿ ಕುಣಿದಾಡಿ ನಾವೂ ದಡಕ್ಕೆ ಬರಬೇಕೆಂದು ಸನ್ನೆ ಮಾಡಿದನು. ನಾವಿಬ್ಬರೂ ಬೇಗ ನೀರಿನಿಂದ ಎದ್ದು ಬಂದೆವು.

"ಹಡಗು ಬರುತ್ತಾ ಇದೆ, ರೋವರ್, ಹಡಗು! ಅಲ್ಲಿ ನೋಡು ಜಾಕಿ, ನನ್ನ ಕೈಯಿನ ನೇರವಲ್ಲಿ, ಒಳಗಡಲಿನ ಬಾಗಿಲಿಗೆ ನೇರವಾಗಿ!" ಎಂದು ಪೀಟರ್ ಕೂಗಿದನು.

ಜಾಕಿ ಸಮುದ್ರದ ಕಡೆ ನೋಡಿದ.

"ಹೌದು, ಪೀಟರ್, ಎರಡು ಕೂವೆ ಕಂಬಗಳಿರುವ ಹಾಗೆ ಕಾಣುತ್ತದೆ. ತಕ್ಕಮಟ್ಟಿಗೆ ದೊಡ್ಡ ಹಡಗೇ ಇರಬೇಕು."

ನಾವಿಬ್ಬರೂ ಬೇಗ ಬೇಗ ಬಟ್ಟೆಗಳನ್ನು ಹಾಕಿಕೊಂಡೆವು. ಆ ಹಡಗಿನ ಪಟಗಳು ಕಣ್ಣಿಗೆ ಬಿದ್ದೊಡನೆಯೇ ನಮ್ಮೆಲ್ಲರ ಮನಸ್ಸಿನಲ್ಲೂ ಕೋಲಾಹಲವೆದ್ದಿತು. ಹಡಗೇನಾದರೂ ನಮ್ಮ ದ್ವೀಪಕ್ಕೇ ಬಂದರೆ

ಮತ್ತೆ ಮನುಷ್ಯರ ಮುಖವನ್ನು ಕಾಣಬಹುದು. ಹಡಗಿನ ಯಜಮಾನ ನಮ್ಮ ಮೇಲೆ ಕನಿಕರಗೊಂಡು ನಮ್ಮನ್ನು ತಾನು ಹೋಗುವ ಬೇರೆ ಯಾವುದಾದರೂ ದ್ವೀಪಕ್ಕೆ ಕರೆದುಕೊಂಡು ಹೋದರೆ, ಅಲ್ಲಿಂದ ನಾವು ಇಂಗ್ಲೆಂಡಿಗೋ ಅಥವಾ ಯೂರೋಪಿನ ಇತರ ದೇಶಗಳಿಗೋ ಹೋಗುವ ಹಡಗುಗಳನ್ನು ಹಿಡಿಯಬಹುದು. ನಮ್ಮ ಊರು, ಮನೆ ಮಠ, ಬಂಧುಗಳು—ಎಲ್ಲವನ್ನೂ ಮತ್ತೆ ಕಾಣಬಹುದು. ಅಷ್ಟು ದಿನವೂ ನಮಗೆ ವಾಸಸ್ಥಾನವಾಗಿದ್ದ ಹವಳದ ದ್ವೀಪ ನಮಗೆ ಬಹಳ ಪ್ರಿಯವಾದದ್ದು, ನಿಜ. ಆದರೂ ಮತ್ತೆ ನಮ್ಮ ತಾಯ್ನಾಡಿನ ನೆನಪು ಬಂದೊಡನೆ ನಮ್ಮ ಈ ದ್ವೀಪದ ಸೌಂದರ್ಯ, ಅದರಲ್ಲಿ ನಾವು ಅನುಭವಿಸಿದ ಸುಖ, ಎಲ್ಲವೂ ಕ್ಷಣಮಾತ್ರದಲ್ಲಿ ಮರೆತು ಹೋದವು. ಯಾವ ಯೋಚನೆಯೂ ಇಲ್ಲದೆ ಅಲ್ಲಿಂದ ಬಿಟ್ಟು ಹೊರಡಲು ಸಿದ್ಧವಾದೆವು. ನಾವು ಸ್ನಾನಮಾಡುತ್ತಿದ್ದ ಜಾಗದಿಂದ ಬೇಗ ಬೇಗ ಓಡಿಹೋಗಿ ನೀರಿನ ದಡದಲ್ಲಿದ್ದ ಎತ್ತರವಾದ ಬಂಡೆಯ ಮೇಲೆ ಹಡಗು ಬರುವುದನ್ನೇ ಕಾಯುತ್ತಾ ನಿಂತೆವು. ಬಲವಾದ ಗಾಳಿ ಬೀಸುತ್ತಿದ್ದುದರಿಂದ ಹಡಗು ವೇಗದಿಂದ ನಮ್ಮ ದ್ವೀಪದ ಕಡೆಗೆ ನೇರವಾಗಿ ಬರುತ್ತಿತ್ತು.

ಸುಮಾರು ಒಂದು ಘಂಟೆಯಾಗುವ ಹೊತ್ತಿಗೆ ಹಡಗು ಬಂಡೆಯ ಸಾಲಿನ ಬಳಿಗೆ ಬಂದು ನಿಂತಿತು. ನಾವಿಕರೆಲ್ಲರೂ ಮೇಲಟ್ಟದಲ್ಲಿ ನಿಂತು ದ್ವೀಪದ ದಡವನ್ನು ಪರೀಕ್ಷಿಸುತ್ತಿದ್ದರು. ನಾವು ಕಾದಿರುವುದು ಅವರಿಗೇನು ಗೊತ್ತು! ಅವರು ದ್ವೀಪದಲ್ಲಿ ಇಳಿಯದೇ ಹೊರಟು ಹೋಗಬಹುದೆಂದು ಹೆದರಿ ನಾವು ಕೈಯಲ್ಲಿ ಬಟ್ಟೆಗಳನ್ನು ಹಿಡಿದು ಬಾವುಟದಂತೆ ಬೀಸಿದೆವು. ಅವರು ಆಗ ನಮ್ಮನ್ನು ಕಂಡಿರಬೇಕು. ನಾವಿಕರು ಮೇಲಟ್ಟದ ಮೇಲೆ ಓಡಾಡಿ ಒಂದು ದೋಣಿಯನ್ನು ನೀರಿಗೆ ಬಿಡುವ ಪ್ರಯತ್ನಮಾಡುತ್ತಿದ್ದರು. ದ್ವೀಪದಲ್ಲಿ ಇಳಿಯುತ್ತಾರೆನ್ನುವುದೇನೋ ನಿಶ್ಚಯವಾದ ಹಾಗಾಯಿತು. ದೋಣಿಯನ್ನು ಇಳಿಸುವ ಮುಂಚೆ ಅವರು ಧ್ವಜಸ್ತಂಭಕ್ಕೆ ತಮ್ಮ ಬಾವುಟವನ್ನೇರಿಸಿದರು. ಹಡಗಿನ ಪಕ್ಕದಲ್ಲಿ ಹೊಗೆ ಕಾಣಿಸಿತು. ಇದೇನಿರಬಹುದು ಅನ್ನುವುದರೊಳಗೆ ಒಂದು ಗುಂಡು ಹಾರಿ ಪೊದೆಗಳನ್ನು ತೂರಿಕೊಂಡು ದಾರಿಯಲ್ಲಿದ್ದ

ತೆಂಗಿನಮರವನ್ನು ಉರುಳಿಸಿ, ನಮ್ಮ ಹತ್ತಿರದಲ್ಲೇ ಬಂಡೆಗೆ ತಗಲಿ ಚೂರು ಚೂರಾಗಿ ಒಡೆದು ಹೋಯಿತು. ನಮಗೆ ಈ ವಿಚಿತ್ರದ ನಡವಳಿಕೆಯನ್ನು ಕಂಡು ಆಶ್ಚರ್ಯವೂ ಭಯವೂ ಆಯಿತು. ಹಡಗಿನ ಮೇಲೆ ಹಾರಾಡುತ್ತಿದ್ದ ಬಾವುಟದ ಕಡೆಗೆ ಕಣ್ಣು ಹೊರಳಿತು. ನೋಡಿದರೆ ಅದು ಕರಿಯ ಬಾವುಟ. ಅದರ ಮೇಲಿದ್ದ ಚಿತ್ರ—ತಲೆಬುರುಡೆ ಮತ್ತೆ ಪಕ್ಕೆಯ ಮೂಳೆಗಳು! ನಮ್ಮೆಲ್ಲರಿಗೂ ಭಯದಿಂದ ಮೈ ಬೆವತು ಹೋಯಿತು. ಮೂವರ ಬಾಯಿಂದಲೂ ಒಂದೇ ಮಾತು ಹೊರಟಿತು. "ಕಡಲುಗಳ್ಳರು!"

ಅದು ಎಂಥ ಹಡಗು ಎಂದು ತಿಳಿಯುವವರೆಗೂ ನಾವು ಮರೆಯಾಗಿದ್ದಿದ್ದರೆ ಚೆನ್ನಾಗಿತ್ತು. ನಾವು ಬಟ್ಟೆಗಳನ್ನು ಬೀಸಿದ್ದು ಕಡಲುಗಳ್ಳರಿಗೆ ಕಂಡಿತ್ತು. ನಮ್ಮ ಹುಚ್ಚುತನವೇ ನಮ್ಮನ್ನು ಅಪಾಯಕ್ಕೆ ಈಡುಮಾಡಿತು. ಆದರೆ ಜಾಕಿ ಎಂಥ ಕಷ್ಟ ಬಂದರೂ ಎದೆಗುಂದುವ ಸ್ವಭಾವದವನಲ್ಲ. "ಏಳಿ, ನನ್ನ ಹಿಂದೆ ಬನ್ನಿ" ಎನ್ನುತ್ತ ಬಂಡೆಯಿಂದ ಕೆಳಕ್ಕೆ ನೆಗೆದು ಕಾಡನ್ನು ದಾಟಿ ಕಳ್ಳದಾರಿಯಿಂದ ನಮ್ಮನ್ನು ಬುಗ್ಗೆ ಬಂಡೆಯ ಬಳಿಗೆ ಕರೆದುಕೊಂಡು ಹೋದನು. ಬಹಳ ಜಾಗರೂಕತೆಯಿಂದ ಬಂಡೆಗಳ ಮರೆಯಲ್ಲೇ ನಡೆದು ಒಂದು ದೊಡ್ಡ ಬಂಡೆಯ ಹಿಂದೆ ನಿಂತು ಹಡಗಿನ ಕಡೆ ಇಣಿಕಿನೋಡಿದೆವು. ಆಗಲೇ ದೋಣಿಯಲ್ಲಿ ಬಂದೂಕು ಮುಂತಾದ ಆಯುಧಗಳನ್ನು ಹಿಡಿದಿದ್ದ ನಾವಿಕರು ತುಂಬಿಕೊಂಡು ದ್ವೀಪದ ದಡಕ್ಕೆ ಬಂದಿದ್ದರು. ದೋಣಿಯು ದಡವನ್ನು ಮುಟ್ಟಿದ ಕೂಡಲೇ ಕಳ್ಳರು ನೆಲಕ್ಕೆ ದುಮುಕಿ ಎಲ್ಲರೂ ಒಂದೇ ಸಾಲಿನಲ್ಲಿ ನಮ್ಮ ಗುಡಿಸಿಲಿನ ಕಡೆಗೆ ನುಗ್ಗಿದರು.

"ನಾವು ಇನ್ನು ಗುಡಿಸಲಿಗೆ ಹೋಗುವುದಕ್ಕಾಗುವುದಿಲ್ಲ. ಅವರು ನಮ್ಮನ್ನು ಹಿಡಿಯುವುದಕ್ಕೆ ದ್ವೀಪವನ್ನೆಲ್ಲಾ ಹುಡುಕುತ್ತಾರೆ. ಆದ್ದರಿಂದ ನಾವು ಕಾಡಿನಲ್ಲಿ ಅವಿತುಕೊಳ್ಳುವುದು ಕಷ್ಟ. ಉಳಿದಿರುವುದು ಒಂದೇ ದಾರಿ. ವಜ್ರದ ಗುಹೆಯನ್ನು ಸೇರಿಕೊಳ್ಳಬೇಕು."

ಜಾಕಿಯ ಸಲಹೆಯೇನೋ ಒಳ್ಳೆಯದೇ. ಆದರೆ ಪೀಟರಿಗೆ ಮುಳುಗುವುದೆಂದರೆ ಪ್ರಾಣಭಯ.

"ವಜ್ರದ ಗುಹೆಯೆ? ಹಾಗಾದರೆ ನನ್ನ ಗತಿಯೇನಾಗಬೇಕು! ಪೆಸಿಫಿಕ್ ಸಾಗರದಲ್ಲಿರುವ ಕಳ್ಳರೆಲ್ಲಾ ನನ್ನನ್ನು ಅಟ್ಟಿಬಂದರೂ ನನ್ನಿಂದ ಮುಳುಗುವುದಕ್ಕಾಗುವುದಿಲ್ಲ!"

"ಹಾಗಲ್ಲ, ಪೀಟರ್, ನೀನು ಸುಮ್ಮನಿದ್ದರೆ ಸಾಕು. ನಾವು ನಿನ್ನನ್ನು ಕರೆದುಕೊಂಡು ಹೋಗುತ್ತೇವೆ. ಆ ಕೆಲಸವನ್ನು ನಮಗೆ ಬಿಟ್ಟುಬಿಡು."

ನಾವು ಇಷ್ಟು ಮಾತಾಡುವುದರಲ್ಲಿ ಕಡಲುಗಳ್ಳರು ಗುಡಿಸಲಿನಲ್ಲಿ ಯಾರನ್ನೂ ಕಾಣದೆ ಅಲ್ಲಿಂದ ನಾಲ್ಕು ಕಡೆಗೂ ಹರಡಿಕೊಂಡು ಕಾಡು, ತೀರಪ್ರದೇಶ, ಬಂಡೆಗಳು, ಮುಂತಾದ ಕಡೆಗಳಲ್ಲೆಲ್ಲಾ ಹುಡುಕಾಡ ತೊಡಗಿದರು. ಒಬ್ಬ ಕಳ್ಳನಿಗೆ ನಾವು ಇದ್ದ ಸ್ಥಳ ಕಂಡಿರಬೇಕು. ಅವನು ನೇರವಾಗಿ ನಮ್ಮ ಕಡೆಗೇ ಓಡಿಬಂದನು. ಜಾಕಿಯೂ ನಾನೂ ಪೀಟರಿನ ಕೈಗಳನ್ನು ಹಿಡಿದುಕೊಂಡೆವು.

"ಪೀಟರ್, ನೀನು ಅಲ್ಲಾಡದೆ ಸಮ್ಮನಿರು. ಇನ್ನು ತಡ ಮಾಡಿದರೆ ನಾವು ಯಾರೂ ಉಳಿಯುವ ಹಾಗಿಲ್ಲ."

ಪೀಟರ್ ಏನೂ ಉತ್ತರಕೊಡಲಿಲ್ಲ. ಆದರೆ ವಜ್ರದ ಗುಹೆಯಲ್ಲದೆ ನಮಗೆ ಬೇರೆ ದಾರಿಯಿಲ್ಲವೆಂದು ಅವನಿಗೆ ಮನವರಿಕೆಯಾಗಿತ್ತು. "ಏನು ಕಷ್ಟ ಬಂದರೂ ಸಹಿಸಿಕೊಳ್ಳುತ್ತೇನೆ" ಎನ್ನುವ ಧೈರ್ಯವೂ ದೃಢನಿಶ್ಚಯವೂ ಅವನ ಮುಖದಲ್ಲಿ ಎದ್ದು ಕಾಣುತ್ತಿದ್ದುವು. ಅಷ್ಟು ಹೊತ್ತಿಗೆ ಕಡಲುಗಳ್ಳರಿಬ್ಬರು ನಾವು ಇದ್ದ ಬಂಡೆಗೆ ಕೆಲವು ಮಾರಿನಷ್ಟು ಹತ್ತಿರ ಬಂದಿದ್ದರು. ಒಂದು ಘಳಿಗೆ ನಮಗೂ ಅವರಿಗೂ ಮಧ್ಯೆ ಇದ್ದ ಬಂಡೆ ನಮ್ಮನ್ನು ಮರೆಮಾಡಿತು. ಆ ಕ್ಷಣದಲ್ಲೇ ನಾವು ಮೂವರೂ ದಡಕ್ಕೆ ಓಡಿ ಒಟ್ಟಿಗೆ ನೀರಿಗೆ ಧುಮುಕಿದೆವು. ಪೀಟರ್ ತನ್ನ ಭಯವನ್ನೆಲ್ಲಾ ಹೇಗೋ ಅದುಮಿ ಬಹಳ ಧೈರ್ಯದಿಂದ ನಡೆದುಕೊಂಡು ಮರದ ತುಂಡಿನಂತೆ ಅಲ್ಲಾಡದೆ ಬಂದನು. ಒಂದು ನಿಮಿಷದೊಳಗಾಗಿ ಗುಹೆಯ ಹೊರದ್ವಾರವನ್ನು ದಾಟಿ ಒಳಭಾಗಕ್ಕೆ ಬಂದೆವು. ಹಿಂದೆ ಎಂದೂ ಅಷ್ಟುವೇಗವಾಗಿ ಗುಹೆಯನ್ನು ಸೇರಿರಲಿಲ್ಲ.

ನೀರಿನಿಂದ ತಲೆಯೆತ್ತಿದ ಕೂಡಲೆ ಪೀಟರ್ ದೀರ್ಘವಾಗಿ

ಉಸಿರೆಳೆದುಕೊಂಡನು ಎಲ್ಲರೂ ಬಂಡೆಯಮೇಲೆ ಹತ್ತಿ ಬಟ್ಟೆಗಳನ್ನು ಹಿಂಡಿ ಹರವಿದೆವು. ಹಿಂದೆಯೇ ಅಲ್ಲಿ ತಂದಿಟ್ಟಿದ್ದ ಪಂಜನ್ನು ಹುಡುಕಿ ಜಾಕಿ ಅದನ್ನು ಹತ್ತಿಸಿ ಬೆಳಕುಮಾಡಿದನು. ಪೀಟರ್ ಆ ಗುಹೆಯನ್ನು ಎಂದೂ ನೋಡಿರಲಿಲ್ಲವಷ್ಟೆ; ಈಗ ಅದರ ಸೌಂದರ್ಯವನ್ನು ನೋಡಿ ಬೆರಗಾಗಿ ಹೋದನು.

ರಾತ್ರಿಯನ್ನು ಗುಹೆಯಲ್ಲೇ ಕಳೆಯುವುದಕ್ಕೆ ಬೇಕಾದ ಏರ್ಪಾಡು ಮಾಡಿಕೊಂಡೆವು. ಜಾಕಿಯೂ ನಾನೂ ಅನೇಕವೇಳೆ ಗುಹೆಗೆ ಬಂದು ಅಲ್ಲಿ ತಿಂಡಿ ತಿನ್ನುವ ಪದ್ಧತಿ. ಆದ್ದರಿಂದ ಬಂದಾಗಲೆಲ್ಲಾ ಏನಾದರೂ ತಿಂಡಿ ಪದಾರ್ಥಗಳನ್ನು ತಂದಿಟ್ಟು ಅಲ್ಲಿಯೇ ಒಂದು ಉಗ್ರಾಣಮಾಡಿ ಕೊಂಡಿದ್ದೆವು. ಕಿರಾತರು ದ್ವೀಪಕ್ಕೆ ಬಂದು ಹೋದಮೇಲೆ ನಮಗೆ ಶತ್ರುಗಳ ಭಯವೂ ಹೆಚ್ಚಿ, ನಾವು ಎಂದಾದರೂ ಆ ಗುಹೆಯಲ್ಲಿ ಅವಿತು ಕೊಳ್ಳಬೇಕಾಗಬಹುದೆಂದು ತೋರಿತ್ತು. ಆದ್ದರಿಂದ ಅದು ವಾಸಕ್ಕೆ ಯೋಗ್ಯವಾಗುವಂತೆ ಅನುಕೂಲಗಳನ್ನು ಕಲ್ಪಿಸಿದ್ದೆವು.

ತಿಂಡಿತಿನ್ನುತ್ತಾ ಬಹಳಹೊತ್ತು ಪಿಸುಮಾತಿನಲ್ಲೇ ಚರ್ಚೆಮಾಡಿ ದೆವು. ದನಿ ಸ್ವಲ್ಪ ದೊಡ್ಡದಾದರೂ ಎಲ್ಲಾಕಡೆಗಳಿಂದಲೂ ಮರುದನಿ ಹೊರಟು ಗುಹೆಯಲ್ಲೆಲ್ಲಾ ಶಬ್ದ ತುಂಬಿಹೋಗುತ್ತಿತ್ತು; ಆದ್ದರಿಂದ ಗಟ್ಟಿಯಾಗಿ ಮಾತಾಡುವುದಕ್ಕೆ ಧೈರ್ಯವೇ ಬರಲೊಲ್ಲದು. ಹೀಗೆಯೇ ಕೆಲವು ಘಂಟೆ ಕಳೆಯಿತು. ದ್ವಾರದಿಂದ ಬರುತ್ತಿದ್ದ ಮೊಬ್ಬೆಳಕು ಕಡಿಮೆಯಾಗುತ್ತಾ ಬಂದು ಕೊನೆಗೆ ಸಂಪೂರ್ಣ ಕತ್ತಲೆ ಕವಿಯಿತು. ರಾತ್ರಿಯಾಯಿತೆಂದು ತಿಳಿದು ನಾವು ಪಂಜನ್ನು ಆರಿಸಿ ಮಲಗಿದೆವು. ನಿದ್ರೆಯೇನೋ ಸುಖವಾಗಿ ಬಂತು.

ಎಚ್ಚರವಾದಮೇಲೆ ನಾವು ಎಲ್ಲಿದ್ದೇವೆನ್ನುವುದು ನೆನಪಿಗೆ ಬರ ಬೇಕಾದರೆ ಅರೆ ನಿಮಿಷ ಹಿಡಿಯಿತು. ಗುಹೆಯ ಬಾಗಿಲಿನಿಂದ ಸ್ವಲ್ಪ ಬೆಳಕು ಕಾಣುತ್ತಿದ್ದುದರಿಂದ ಬೆಳಕುಹರಿದಿರಬೇಕೆಂದು ಗೊತ್ತಾಯಿತು. ಆದರೆ ಸೂರ್ಯ ಹುಟ್ಟಿ ಎಷ್ಟು ಹೊತ್ತಾಗಿರಬಹುದೆಂದು ಹೇಳುವು ದಕ್ಕಾಗುತ್ತಿರಲಿಲ್ಲ. ಕಡಲುಗಳ್ಳರು ಹೊರಟುಹೋದರೋ ಅಥವಾ ದ್ವೀಪ ದಲ್ಲಿಯೇ ಬಿಡಾರಮಾಡಿದ್ದರೋ ಎಂಬ ಶಂಕೆ ಬೇರೆ ಬಾಧಿಸುತ್ತಿತ್ತು.

"ರೋವರ್, ನಾನು ಮುಳುಗಿ ದ್ವೀಪಕ್ಕೆ ಹೋಗಿ ಅಲ್ಲಿಯ ಸ್ಥಿತಿ ಹೇಗಿದೆಯೋ ನೋಡಿಕೊಂಡು ಬರುತ್ತೇನೆ" ಎಂದು ಜಾಕಿ ಮೇಲೆದ್ದನು.

"ನೀನು ಹೋಗಬೇಡ, ಜಾಕಿ. ನಿನ್ನೆ ನೀನು ದಣಿದದ್ದೇ ಸಾಕು. ಸುಮ್ಮನೆ ವಿಶ್ರಾಂತಿ ತೆಗೆದುಕೊ. ನಾನೇ ಹೋಗಿ ಬರುತ್ತೇನೆ." ಎಂದು ಹೇಳಿ ನೀರಿಗೆ ಧುಮುಕಿ ಬೇಗ ದ್ವೀಪವನ್ನು ಸೇರಿದೆ. ದಡ ಹತ್ತುವಾಗ ಗಟ್ಟಿಯಾಗಿ ಉಸಿರುಬಿಟ್ಟರೆ ಎಲ್ಲಿ ಕಳ್ಳರ ಕೈಗೆ ಸಿಕ್ಕಿಬೀಳುವೆನೋ ಎಂದು ಜಾಗರೂಕನಾಗಿ ಬಂಡೆಗಳ ಮರೆಯಲ್ಲೇ ಹತ್ತಿ ಬಂದೆ. ಸುತ್ತಮುತ್ತ ಯಾರೂ ಕಾಣಲಿಲ್ಲ. ಸ್ವಲ್ಪ ಧೈರ್ಯ ತಂದುಕೊಂಡು ದೊಡ್ಡ ಬಂಡೆಯಮೇಲೆ ಹತ್ತಿ ಯಾರಿಗೂ ಕಾಣದಂತೆ ಅದರ ಮೇಲೆ ಮಲಗಿಕೊಂಡು ಮೆಲ್ಲನೆ ತಲೆಯೆತ್ತಿ ಸುತ್ತಲೂ ನೋಡಿದೆನು. ಕಡಲುಗಳ್ಳರು ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಆದರೂ ಅವರು ಎಲ್ಲಿಯಾದರೂ ಅವಿತುಕೊಂಡಿರಬಹುದೆಂಬ ಶಂಕೆಯಿಂದ ಜಾಗರೂಕನಾಗಿಯೇ ನಡೆದುಕೊಂಡೆ. ಒಂದು ನಿಮಿಷವಾದ ಮೇಲೆ ಸಮುದ್ರದ ಕಡೆ ತಿರುಗಿದೆ. ಕಳ್ಳರ ಹಡಗು ಹೊರಟುಹೋಗಿತ್ತು. ಭೂಮಿ ಆಕಾಶಗಳು ಕೂಡುವ ಸ್ಥಳದಲ್ಲಿ ಅದರ ಪಟಗಳು ಕಾಣುತ್ತಿದ್ದುವು. ಆನಂದದಿಂದ ಒಂದು ಕೂಗುಹಾಕಿ, ಕೂಡಲೇ ಗುಹೆಗೆ ಹೋಗಿ ಸ್ನೇಹಿತರಿಗೆ ಈ ಶುಭ ವರ್ತಮಾನ ಕೊಡಬೇಕೆಂದು ಒಂದು ಹೆಜ್ಜೆ ಮುಂದಿಟ್ಟೆ. ಕೂಡಲೆ ನಾನು ಕಂಡ ಹಡಗು ಕಡಲುಗಳ್ಳರದ್ದೋ ಅಥವಾ ಬೇರೆ ಯಾವುದಾದರೂ ಇರಬಹುದೋ ಎಂಬ ಸಂಶಯ ಬಂದು ಸ್ವಲ್ಪ ಮುಂದೆ ಹೋಗಿ ಎಲ್ಲಾ ಕಡೆಗೂ ನೋಡಿದೆ. ದ್ವೀಪದ ಹತ್ತಿರದಲ್ಲೆಲ್ಲೂ ಹಡಗು ಕಾಣಿಸಲಿಲ್ಲ. ಮನಸ್ಸು ನಿರಾಳವಾಯಿತು. ದೊಡ್ಡ ನಿಟ್ಟುಸಿರುಬಿಟ್ಟು, "ಸರಿ, ಕಡಲುಗಳ್ಳರು ಹೊರಟುಹೋದರು. ಸದ್ಯಕ್ಕೆ ಆ ರಾಕ್ಷಸರ ಕೈಗೆ ಸಿಕ್ಕದೆ ತಪ್ಪಿಸಿಕೊಂಡ ಹಾಗಾಯಿತು" ಎಂದೆನು.

ನನ್ನ ಮಾತು ಮುಗಿಯುವುದರೊಳಗೇ ಹಿಂದಿನಿಂದ ಗಡುಸಾದ ದನಿಯೊಂದು ಕೇಳಿಬಂತು. "ನಿಜವೇ? ರಾಕ್ಷಸರ ಕೈಯಿಂದ ಪಾರಾದೆಯಾ? ಈ ರಾಕ್ಷಸನಿಗೆ ಏನು ಉತ್ತರ ಹೇಳುತ್ತೀ?'' ಎನ್ನುತ್ತಾ ಯಾರೋ ಒಬ್ಬರು ನನ್ನ ಹೆಗಲ ಮೇಲೆ ಕೈಹಾಕಿ ಅಲುಗಾಡದಂತೆ

ನನ್ನನ್ನು ಭದ್ರವಾಗಿ ಹಿಡಿದರು.

ಬೆಚ್ಚಿಬಿದ್ದು ಹಿಂದಿರುಗಿ ನೋಡಿದರೆ ನಿಜವಾಗಿ ರಾಕ್ಷಸನಂತೆ ಎತ್ತರವಾಗಿಯೂ ಕ್ರೂರಿಯಾಗಿಯೂ ಕಾಣುತ್ತಿದ್ದ ಕಳ್ಳನೊಬ್ಬನು ತಿರಸ್ಕಾರದಿಂದ ನಗುತ್ತ ನಿಂತಿದ್ದನು. ಅವನು ಬಿಳಿಯ ಜನಾಂಗದವನಾದರೂ ಬಹುಕಾಲ ಉಷ್ಣವಲಯದಲ್ಲೇ ತಿರುಗಿದ್ದರಿಂದ ಮುಖ ಸ್ವಲ್ಪ ಕಂದುಬಣ್ಣಕ್ಕೆ ತಿರುಗಿತ್ತು. ಸಾಧಾರಣವಾಗಿ ನಾವಿಕರು ಧರಿಸುವ ಉಡುಪನ್ನೇ ಹಾಕಿಕೊಂಡು ಸೊಂಟಕ್ಕೆ ಬೆಲೆಬಾಳುವ ರೇಷ್ಮೆಯ ವಸ್ತ್ರವನ್ನು ಸುತ್ತಿದ್ದನು. ಸೊಂಟದಿಂದ ಒಂದು ಕತ್ತಿಯೂ ಎರಡು ಜೊತೆ ಪಿಸ್ತೂಲುಗಳೂ ತೂಗುಬಿದ್ದಿದ್ದವು. ಆವನ ಗಡ್ಡ, ಮೀಸೆ, ಗುಂಗುರು ಗುಂಗುರಾಗಿದ್ದ ತಲೆಗೂದಲು—ಎಲ್ಲವೂ ಸ್ವಲ್ಪ ಮಟ್ಟಿಗೆ ನರೆತಿದ್ದವು.

ಮತ್ತಷ್ಟು ಭದ್ರವಾಗಿ ನನ್ನನ್ನು ಹಿಡಿದು, ಅಣಕಿಸುವವನಂತೆ ನಗುತ್ತಾ "ಏನೋ ಬಚ್ಚ, ರಾಕ್ಷಸರ ಕೈಯಿಂದ ಪಾರಾದೆಯಲ್ಲವೆ! ಇರಲಿ, ನೋಡೋಣ. ಅಲ್ಲಿ ನೋಡು, ಯಾರು ಬರುತ್ತಿದ್ದಾರೆ!" ಎಂದು ಒಂದು ಸಿಳ್ಳುಹಾಕಿದನು. ಆದಕ್ಕೆ ಉತ್ತರವಾಗಿ ತಕ್ಷಣವೇ ಮತ್ತೊಂದು ಸಿಳ್ಳು ಬಂತು. ಸಣ್ಣ ಕೊಲ್ಲಿಯೊಂದರಲ್ಲಿ ಬಚ್ಚಿಟ್ಟಿದ್ದ ದೋಣಿಯನ್ನು ಯಾರೋ ನಡೆಸಿಕೊಂಡು ಬಂದರು.

"ಎಲೋ ಕುನ್ನಿ, ಹೋಗಿ ಸ್ವಲ್ಪ ಸೌದೆ ತಂದು ಈ ಬಂಡೆಯ ಮೇಲೆ ಬೆಂಕಿ ಹತ್ತಿಸು. ಜೋಕೆ, ಓಡಿಹೋಗುವದಕ್ಕೇನಾದರೂ ಪ್ರಯತ್ನಪಟ್ಟರೆ ನಿನ್ನನ್ನು ತಡೆಯುವುದಕ್ಕೆ ಜವಾನ ಹಿಂದೆಯೇ ಬರುತ್ತಾನೆ.'' ಎಂದು ತನ್ನ ಪಿಸ್ತೂಲನ್ನು ತೋರಿಸಿದನು.

ಬೇಗ ಬೆಂಕಿಯನ್ನು ಹತ್ತಿಸಿದೆ. ಅದರ ಹೊಗೆ ಆಕಾಶಕ್ಕೆ ಏರಿದ ಒಂದೆರಡು ನಿಮಿಷಗಳಲ್ಲಿಯೇ ಸಮುದ್ರದಿಂದ ಗುಂಡುಹಾರಿಸಿದ ಸದ್ದು ಕೇಳಿಸಿತು. ಕಾಲು ಘಂಟೆಯೊಳಗಾಗಿ ಹಡಗು ಮತ್ತೆ ದ್ವೀಪದ ಕಡೆಗೇ ಬರುತ್ತಿದ್ದುದನ್ನು ಕಂಡೆ. ಕಡಲುಗಳ್ಳರು ಹೂಡಿದ್ದ ಉಪಾಯ ಈಗ ಅರ್ಥವಾಯಿತು. ಇಬ್ಬರನ್ನು ಮಾತ್ರ ದ್ವೀಪದಲ್ಲಿ ಬಿಟ್ಟು ಹಡಗನ್ನು ನಡೆಸಿಕೊಂಡು ಹೋಗಿದ್ದರು. ಬೆಂಕಿಯ ಹೊಗೆ ಕಂಡಮೇಲೆ ನಾನು ಸಿಕ್ಕಿಬಿದ್ದೆನೆಂದು ಹಡಗಿನವರಿಗೆ ಗೊತ್ತಾಯಿತು.

ಹಡಗು ಬಂದಮೇಲೆ ನಾವಿಕರೆಲ್ಲಾ ದಡಕ್ಕೆ ಹತ್ತಿ ಬಂದು ನನ್ನನ್ನು ಸೆರೆಹಿಡಿದವನಿಗೆ ಸಲಾಮು ಮಾಡಿದರು. ಅವನೇ ಹಡಗಿನ ಕ್ಯಾಪ್ಟನ್ನಾಗಿರಬೇಕು. ತಮ್ಮ ತಂತ್ರ ಫಲಿಸಿತೆಂದು ಅವರು ನನ್ನನ್ನು ಬಹಳ ಹಾಸ್ಯಮಾಡಿದರು. ಎಲ್ಲರೂ ಒರಟೊರಟಾಗಿ ಗಡ್ಡ ಬೆಳೆಸಿ ಹುಬ್ಬು ಗಂಟುಹಾಕಿಕೊಂಡಿದ್ದವರೇ, ಕ್ಯಾಪ್ಟನ್ನಿನಂತೆಯೇ ಉಡುಪು ಹಾಕಿಕೊಂಡು ಪಿಸ್ತೂಲುಗಳನ್ನೂ ಕತ್ತಿಗಳನ್ನೂ ಇಟ್ಟುಕೊಂಡಿದ್ದರು. ನೋಡಿದರೆ ಎಂಥ ಹೀನ ಕೃತ್ಯಕ್ಕಾದರೂ ಹೇಸುವವರಲ್ಲವೆಂದು ತೋರಿತು.

"ಇವನನ್ನು ತೆಗೆದುಕೊಂಡು ಹೋಗಿ ದೋಣಿಗೆ ಹಾಕಿ. ಜಾಗ್ರತೆ ಮಾಡಿ. ಗಾಳಿ ಜೋರಾಗುತ್ತಿದೆ.'' ಎಂದು ಕ್ಯಾಪ್ಟನ್ನನ ಅಪ್ಪಣೆ ಯಾಯಿತು. ಇಬ್ಬರು ನಾವಿಕರು ನನ್ನನ್ನು ಹೆಗಲಮೇಲೆ ಎತ್ತಿಕೊಂಡು ಬಂಡೆಗಳನ್ನಿಳಿದು ದೋಣಿಯೊಳಕ್ಕೆ ನನ್ನನ್ನು ಎಸೆದುಬಿಟ್ಟರು. ಬಿದ್ದ ಪೆಟ್ಟಿನಿಂದ ಸ್ವಲ್ಪ ಹೊತ್ತು ನನಗೆ ಜ್ಞಾನ ತಪ್ಪಿಹೋಯಿತು. ಮತ್ತೆ ತಿಳಿವು ಬಂದ ಮೇಲೆ ಮೊಣಕೈ ಊರಿಕೊಂಡು ಕತ್ತೆತ್ತಿ ನೋಡಿದೆ. ದೋಣಿ ಆಗಲೇ ಬಂಡೆಯ ಸಾಲನ್ನು ದಾಟಿ ಹಡಗಿನ ಪಕ್ಕಕ್ಕೆ ಬಂದಿತ್ತು. ಹಡಗು ಸಣ್ಣದಾದರೂ ವೇಗವಾಗಿ ಹೋಗುವಂತೆ ಕಟ್ಟಿದ್ದು. ಆದರೆ ಅದನ್ನು ಸಾವಧಾನವಾಗಿ ನೋಡುವಷ್ಟು ಸಮಯವಿರಲಿಲ್ಲ. ನಾವಿಕನೊಬ್ಬ ನನ್ನನ್ನು ಬಲವಾಗಿ ಒದ್ದು "ಏಳು, ಹಡಗನ್ನು ಹತ್ತ ಬೇಕು.'' ಎಂದನು. ಬೇಗ ಎದ್ದು ಎಲ್ಲರೊಡನೆ ನಾನೂ ಹಡಗನ್ನೇರಿದ ಮೇಲೆ ದೋಣಿಯನ್ನೂ ಎಳೆದುಕೊಂಡರು. ಹಡಗು ಹೊರಟಿತು. ಅಲೆ ಗಳನ್ನು ಸೀಳುತ್ತ ಹಡಗು ಮುಂದುವರಿದ ಹಾಗೆಲ್ಲಾ ಹವಳದ ದ್ವೀಪ ಹಿಂದಾಗುತ್ತ ಬಂತು.

ಕ್ಯಾಪ್ಟನ್ನನ ಅಪ್ಪಣೆಯಂತೆ ನಾನು ಅಟ್ಟದಿಂದ ಕೆಳಗಿಳಿಯ ಬೇಕಾಯಿತು. ಸಂಜೆಯ ಹೊತ್ತಿಗೆ ಕ್ಯಾಪ್ಟನ್ ನನ್ನೊಡನೆ ಮಾತಾಡ ಬೇಕೆಂದು ಹೇಳಿಕಳಿಸಿದನು. ಅವನ ಕೊಠಡಿ ಸಣ್ಣದು; ಹೆಚ್ಚು ಉಪ ಕರಣಗಳಿಲ್ಲದಿದ್ದರೂ ಅನುಕೂಲಕ್ಕೆ ಸಾಕಷ್ಟು ಇದ್ದವು. ತೊಲೆಯಿಂದ ಬೆಳ್ಳಿಯ ದೀಪವೊಂದು ತೂಗುಬಿದ್ದು ಕೋಣೆಯಲ್ಲಿ ಮೃದುವಾದ ಬೆಳ

ಕನ್ನು ಹರಡಿತ್ತು. ಮೇಜಿನಮೇಲೆ ಪೆಸಿಫಿಕ್‌ಸಾಗರದ ಭೂಪಟವ ನ್ನಿಟ್ಟುಕೊಂಡು ಪರೀಕ್ಷಿಸುತ್ತಾ ಕ್ಯಾಪ್ಟನ್ ತನ್ನ ಸ್ಟೂಲಿನ ಮೇಲೆ ಕೂತಿದ್ದನು. ನಾನು ಪ್ರವೇಶಿಸಿದಾಗ ಕತ್ತೆತ್ತಿ ನೋಡಿ ನನ್ನನ್ನು ಕುಳಿತುಕೊಳ್ಳಹೇಳಿದನು. ಧ್ವನಿಯಲ್ಲಿ ಕೋಪವಾಗಲಿ ತಿರಸ್ಕಾರವಾಗಲಿ ಕಾಣಲಿಲ್ಲ. ಕೈಯಲ್ಲಿದ್ದ ಸೀಸದಕಡ್ಡಿಯನ್ನು ಮೇಜಿನಮೇಲೆ ಇಟ್ಟು, ಎದ್ದು ಒಂದು ಸಾರಿ ಮೈಮುರಿದು ಕೋಣೆಯ ಮೂಲೆಯಲ್ಲಿದ್ದ ಸೋಫಾದ ಮೇಲೆ ಕಾಲುನೀಡಿ ಕುಳಿತುಕೊಂಡನು.

"ನಿನ್ನ ಹೆಸರೇನು, ಮಗು ?"

"ರಾಲ್ಫ್ ರೋವರ್."

"ನಿನ್ನ ಊರು ಯಾವುದು ? ಆ ದ್ವೀಪಕ್ಕೆ ಬಂದದ್ದು ಹೇಗೆ ? ನಿನ್ನ ಜೊತೆಯಲ್ಲಿ ಎಷ್ಟು ಜನ ಇದ್ದರು ?"

ನಾನು ಇಂಗ್ಲೆಂಡು ಬಿಟ್ಟ ದಿನದಿಂದ ಕ್ಯಾಪ್ಟನ್ನನ ಕೈಗೆ ಸಿಕ್ಕುವ ವರೆಗೂ ನಮ್ಮ ಕಥೆಯನ್ನೆಲ್ಲಾ ಹೇಳಿದೆ. ಆದರೆ ವಜ್ರದ ಗುಹೆಯ ವಿಷಯ ಮಾತ್ರ ಒಂದು ಮಾತೂ ಆಡಲಿಲ್ಲ.

"ನಿನ್ನ ಸ್ನೇಹಿತರು ಎಲ್ಲಿದಾರೆ ?"

"ಅದನ್ನು ನಾನು ಹೇಳುವುದಿಲ್ಲ."

"ಏಕೆ ?"

"ನೀವು ಕಡಲುಗಳ್ಳರು ; ಅವರಿರುವ ಸ್ಥಳ ಗೊತ್ತಾದರೆ ನನ್ನನ್ನು ಹಿಡಿದ ಹಾಗೇ ಅವರನ್ನೂ ಹಿಡಿಯುತ್ತೀರಿ."

ಕ್ಯಾಪ್ಟನ್ ಸ್ವಲ್ಪ ನಕ್ಕನು. "ನಾವು ಕಡಲುಗಳ್ಳರೆಂದು ಹೇಳಿದವರು ಯಾರು ?"

"ನಿಮ್ಮ ಹಡಗಿನ ಮೇಲಿರುವ ಕರಿಯ ಬಾವುಟ."

"ಅಷ್ಟೇ ತಾನೆ ? ಕರಿಯ ಬಾವುಟ ಹಾರಿಸಿದ ಮಾತ್ರಕ್ಕೆ ನಾವು ಕಡಲುಗಳ್ಳರಾದೆವೆ ? ನಮ್ಮ ನಾವಿಕರು ಒಂದೊಂದು ವೇಳೆ ಹಾಸ್ಯಕ್ಕಾಗಿ ಕರಿಯ ಬಾವುಟ ಹಾರಿಸಿ ಜನರನ್ನು ಹೆದರಿಸುವುದುಂಟು. ಅದರಿಂದ ಕೆಡಕೇನೂ ಆಗಿಲ್ಲವಾದ್ದರಿಂದ ಹಾರಿಸಿಕೊಳ್ಳಲೆಂದು ನಾನು ಸುಮ್ಮನೆ ಬಿಟ್ಟಿದೇನೆ. ನಾನು ಕಳ್ಳನಲ್ಲ ರೋವರ್; ನ್ಯಾಯವಾದ

ರೀತಿಯಲ್ಲಿ ವ್ಯಾಪಾರ ಮಾಡುವುದೇ ನನ್ನ ಕಸಬು. ಫೀಜೀ ದ್ವೀಪಗಳಲ್ಲಿ ಗಂಧದ ಮರದ ವ್ಯಾಪಾರವನ್ನಿಟ್ಟುಕೊಂಡಿದೇನೆ. ನೀನು ಸಭ್ಯನಾಗಿ ನಡೆದುಕೊಂಡು ನಮ್ಮ ಜೊತೆಗೆ ಬರುವುದಾದರೆ ನಿನ್ನನ್ನೂ ನಮ್ಮ ಕಂಪೆನಿಗೆ ಸೇರಿಸಿಕೊಂಡು ಬಂದ ಲಾಭದಲ್ಲಿ ನಿನಗೂ ಒಂದು ಭಾಗ ಕೊಡುತ್ತೇವೆ. ಹಡಗಿನಲ್ಲಿ ದಿನಚರಿ ಪುಸ್ತಕ ಬರೆಯುವುದು, ಆಗಿಂದಾಗ ದ್ವೀಪಗಳಲ್ಲಿ ಗಂಧದ ಮರ ಕಡಿಯುವಾಗ ಉಸ್ತುವಾರಿ ನೋಡಿಕೊಳ್ಳುವುದು ಮುಂತಾದ ಕೆಲಸಕ್ಕೆ ಪ್ರಾಮಾಣಿಕರಾದವರು ಯಾರಾದರೂ ಬೇಕಾಗಿದೆ. ಏನು ಹೇಳುತ್ತಿ, ರೋವರ್? ನೀನೂ ಗಂಧದ ವ್ಯಾಪಾರಿಯಾಗಲು ಇಷ್ಟವಿದೆಯೆ ?"

ಅವನ ಪ್ರಶ್ನೆಗೆ ನೇರವಾಗಿ ಉತ್ತರಕೊಡದೆ ಅದಕ್ಕೆ ಪ್ರತಿಯಾಗಿ ನಾನೊಂದು ಪ್ರಶ್ನೆ ಕೇಳಿದೆ.

"ನೀವು ಹೇಳುವುದು ನಿಜವಾದರೆ, ನನ್ನನ್ನು ದ್ವೀಪದಿಂದ ಹಿಡಿದು ತಂದದ್ದೇಕೆ? ಈಗಲೂ ನನ್ನನ್ನು ಹಿಂದಕ್ಕೆ ಕರೆದುಕೊಂಡು ಹೋಗಿ ಬಿಡಬಹುದಲ್ಲ!"

ಕ್ಯಾಪ್ಟನ್ ಸ್ವಲ್ಪ ನಕ್ಕು, "ಏನೋ ಕೋಪದಲ್ಲಿ ನಿನ್ನನ್ನು ಸೆರೆ ಹಿಡಿದದ್ದಾಯಿತು. ಈಗ ಹಾಗೆ ಮಾಡಬಾರದಾಗಿತ್ತು ಎನ್ನಿಸುತ್ತಿದೆ. ನಿನ್ನನ್ನು ಮತ್ತೆ ಅಲ್ಲಿಯೇ ಬಿಡಬಹುದು. ಆದರೆ ಈಗಾಗಲೇ ದ್ವೀಪದಿಂದ ಬಹುದೂರ ಬಂದುಬಿಟ್ಟಿದೇವೆ. ಈ ಭೂಪಟವನ್ನು ನೋಡು ಇದೇ ನಿಮ್ಮ ದ್ವೀಪ. ಈಗ ನಾವಿರುವ ಜಾಗದಿಂದ ಕೊನೆಯ ಪಕ್ಷ ಐವತ್ತು ಮೈಲಿಯಾದರೂ ಆಗುತ್ತೆ. ನನ್ನ ನಾವಿಕರೂ ವ್ಯಾಪಾರದಲ್ಲಿ ಪಾಲುಗಾರರು. ಈಗ ಹಿಂದಿರುಗಿದರೆ ಅವರಿಗೆ ಅನ್ಯಾಯಮಾಡಿದ ಹಾಗಾಗುತ್ತೆ."

ಇದಕ್ಕೆ ನಾನೇನೂ ಉತ್ತರ ಹೇಳುವಂತಿರಲಿಲ್ಲ. ಸ್ವಲ್ಪ ಹೊತ್ತು ಮಾತು ನಡೆದ ಮೇಲೆ ನಾನೂ ಅವರ ಜೊತೆಗೆ ಸೇರುವುದಾಗಿ ಒಪ್ಪಿದೆ. ಆದರೆ ಯೂರೋಪಿಗೆ ಹೋಗುವ ಹಡಗು ಯಾವುದಾದರೂ ಸಿಕ್ಕಿದರೆ ನನ್ನನ್ನು ಅದರಲ್ಲಿ ಕಳಿಸಿಕೊಡಬೇಕೆಂದು ಕೇಳಿಕೊಂಡೆ.

# ೧೧

# ಕಡಲುಗಳ್ಳರ ಕೂಟದಲ್ಲಿ

ಆ ಹಡಗಿನಲ್ಲಿದ್ದಾಗ ನನಗೂ ನಾವಿಕನೊಬ್ಬನಿಗೂ ಸ್ನೇಹ ಬೆಳೆಯಿತು. ಅವನ ಹೆಸರು ಬಿಲ್ಲಿ. ಜೀವಮಾನವೆಲ್ಲ ಒರಟು ಜನರ ಸಹವಾಸದಲ್ಲಿದ್ದು ಅವನ ನಡತೆ ಸ್ವಲ್ಪ ಒರಟಾಗಿದ್ದರೂ ಮನಸ್ಸು ಬಹಳ ಒಳ್ಳೆಯದು. ನನಗೆ ಕ್ಯಾಪ್ಟನ್ನನ ವಿಷಯದಲ್ಲಿ ಇನ್ನೂ ಸಂದೇಹವೇ ಇದ್ದುದ್ದರಿಂದ ಒಂದು ದಿನ ಬಿಲ್ಲಿಯನ್ನು ಕೇಳಿದೆ.

" ಬಿಲ್ಲಿ, ನಿಜವಾಗಿ ಹೇಳು, ಈ ಹಡಗಿನವರು ಕಡಲುಗಳ್ಳರೋ ಅಲ್ಲವೋ ? "

" ಅಂದು ಕ್ಯಾಪ್ಟನ್ ಜೊತೆಯಲ್ಲಿ ಮಾತಾಡಿದೆಯಲ್ಲ, ಅವನೇನು ಹೇಳಿದ ? "

" ತಾನು ಸಭ್ಯನಾದ ವ್ಯಾಪಾರಿಯೆಂದು ಹೇಳಿದ.''

" ನಿಜ. ಆದರೆ ಕಡಲುಗಳ್ಳನೂ ಹೌದು. ಅವನ ವ್ಯಾಪಾರವೆಲ್ಲಾ ಈ ದ್ವೀಪಗಳಲ್ಲಿರುವ ಕಾಡುಜನರೊಡನೆ. ಬಲಪ್ರಯೋಗ ಸಾಧ್ಯವಿಲ್ಲದೆ ಇದ್ದಾಗ ಅವರೊಡನೆ ವ್ಯಾಪಾರ ಮಾಡುತ್ತಾನೆ. ಆದರೆ ಅವರೊಡನೆ ಯುದ್ಧಮಾಡಿ ತನಗೆ ಬೇಕಾದ್ದನ್ನೆಲ್ಲ ಬಲವಂತವಾಗಿ ವಸೂಲು ಮಾಡುವುದೇ ಹೆಚ್ಚು. ಕಾಡುಜನರೊಡನೆ ವ್ಯವಹಾರ ಮಾಡುವಾಗ ನಮ್ಮ ಬಿಳಿಯ ಜನಾಂಗದವರು ಅನೇಕ ವೇಳೆ ಅಷ್ಟೇನೂ ಸಭ್ಯರಾಗಿ ನಡೆದುಕೊಳ್ಳುವುದಿಲ್ಲ. ಅವರಲ್ಲಿ ಹೇಗೋ ಹಾಗೇ ನಮ್ಮಲ್ಲಿಯೂ ಕೇಡಿಗಳು ಬೇಕಾದಹಾಗಿದ್ದಾರೆ. ನಮ್ಮ ಕ್ಯಾಪ್ಟನ್ ವ್ಯಾಪಾರಿಯೂ ಹೌದು, ಕಳ್ಳನೂ ಹೌದು."

ಕೆಲವು ದಿನ ಪ್ರಯಾಣ ಮಾಡಿದಮೇಲೆ ಹುಲುಸಾಗಿ ಮರಗಳು ಬೆಳೆದಿದ್ದ ದ್ವೀಪವೊಂದರ ಬಳಿಗೆ ಬಂದೆವು. ಅದು ಕಣ್ಣಿಗೆ ಬಿದ್ದಾಗ ಬಿಲ್ಲಿ ನನ್ನ ಮಗ್ಗುಲಲ್ಲೇ ಇದ್ದನು.

" ಆ ದ್ವೀಪವನ್ನು ನಾನು ಚೆನ್ನಾಗಿ ಬಲ್ಲೆ. ಅದರ ಹೆಸರು ಏಮೊ." ಎಂದನು.

"ಹಾಗಾದರೆ ನೀನು ಅಲ್ಲಿ ಯಾವಾಗಲಾದರೂ ಇಳಿದಿರಬೇಕು ?"

" ಎಷ್ಟೋ ಸಲ. ಈ ಹಡಗೂ ಎಷ್ಟೋ ಸಾರಿ ಇಲ್ಲಿಗೆ ಬಂದಿದೆ. ಏಮೋ ದ್ವೀಪ ಶ್ರೀಗಂಧದ ಮರಕ್ಕೆ ಬಹಳ ಪ್ರಸಿದ್ಧಿ. ಇಲ್ಲಿಂದ ಹಡಗು ಗಟ್ಟಲೆ ಶ್ರೀಗಂಧದಮರವನ್ನು ಸಾಗಿಸಿದ್ದೇವೆ. ಇಲ್ಲಿಯ ಜನಸಂಖ್ಯೆ ಹೆಚ್ಚಾಗಿರುವುದರಿಂದ ಬಲವಂತವಾಗಿ ಏನನ್ನೂ ತೆಗೆದುಕೊಳ್ಳುವುದ ಕ್ಕಾಗುವುದಿಲ್ಲ ; ಸಾಧಾರಣವಾಗಿ ಪ್ರತಿಫಲ ಕೊಡಬೇಕಾಗುತ್ತೆ. ನಮ್ಮ ಕ್ಯಾಪ್ಟನ್ ಅನೇಕಸಾರಿ ಅವರಿಗೆ ಮೋಸಮಾಡಿದ್ದರಿಂದ ಇಲ್ಲಿಯ ಕಿರಾ ತರಿಗೆ ಅವನನ್ನು ಕಂಡರೆ ಆಗುವುದಿಲ್ಲ. ಕಳೆದ ಬಾರಿ ಇಲ್ಲಿಗೆ ಬಂದಿ ದ್ದಾಗ ನಮ್ಮ ನಾವಿಕರು ಬಹಳ ದುಷ್ಟತನ ತೋರಿಸಿದರು. ಕ್ಯಾಪ್ಟನ್ ಧೈರ್ಯಮಾಡಿ ಬಂದದ್ದೇ ನನಗೆ ಆಶ್ಚರ್ಯ. ಆದರೆ ಆ ಮನುಷ್ಯ ಪ್ರಪಂಚದಲ್ಲಿ ಯಾವುದಕ್ಕೂ ಹೆದರುವಂಥವನಲ್ಲ.''

ನಮ್ಮ ದ್ವೀಪದಲ್ಲಿದ್ದ ಹಾಗೇ ಇಲ್ಲಿಯೂ ದ್ವೀಪದ ಸುತ್ತ ಬಂಡೆಯ ಸಾಲಿತ್ತು. ನಾವು ಅದರೊಳಗೆ ಪ್ರವೇಶಿಸಿ ಸುಮಾರು ಆರು ಆಳು ಉದ್ದವಿದ್ದ ಒಂದು ಸಣ್ಣ ಕೊಲ್ಲಿಯ ಬಳಿ ಲಂಗರು ಹಾಕಿದೆವು. ದಡದ ವರೆಗೂ ದಟ್ಟವಾದ ಕಾಡು ಬೆಳೆದಿತ್ತು. ಆ ಸ್ಥಳದಿಂದ ಅರ್ಧಮೈಲಿ ದೂರದಲ್ಲೇ ದ್ವೀಪವಾಸಿಗಳ ಮುಖ್ಯವಾದ ಹಳ್ಳಿ. ದೋಣಿಯನ್ನು ಇಳಿಸಬೇಕೆಂದು ಅಪ್ಪಣೆಮಾಡಿ ಕ್ಯಾಪ್ಟನ್ ನನ್ನನ್ನೂ ಜೊತೆಗೆ ಬರ ಹೇಳಿದನು. ಹಳ್ಳಿಗೆ ಹೊರಟ ನಮ್ಮ ಗುಂಪಿನಲ್ಲಿ ಆಯುಧಪಾಣಿಗಳಾದ ಹದಿನೈದು ಜನರಿದ್ದರು. ಯುದ್ಧಮಾಡುವ ಸಂಭವವೇನಾದರೂ ಒದಗೀತೆಂದು ಹಡಗಿನ ಮೇಲಟ್ಟದಲ್ಲಿದ್ದ ದೊಡ್ಡ ಫಿರಂಗಿಗೆ ಮದ್ದು ಗುಂಡು ತುಂಬಿ ಸಿದ್ಧಮಾಡಿಟ್ಟೆವು.

" ಹೊರಡಿ. ''ಎಂದು ಕ್ಯಾಪ್ಟನ್ ಅಪ್ಪಣೆ ಕೊಟ್ಟಕೂಡಲೆ ಹುಟ್ಟು ಗಳು ನೀರಿಗೆ ಬಿದ್ದುವು. ದೋಣಿ ನಾಲ್ಕೈದು ನಿಮಿಷಗಳಲ್ಲೇ ದಡ ವನ್ನು ಮುಟ್ಟಿತು. ನಮ್ಮ ಹಡಗು ಬರುವುದನ್ನು ಕಾಡುಜನರು ಮೊದಲೇ ನೋಡಿದ್ದರು. ದ್ವೀಪದ ಮುಖ್ಯ ನಾಯಕನಾದ ರೋಮಟನು ದಡದ ಬಳಿ ಸುಖಾಗಮನವನ್ನು ಬಯಸಿ, ಹಳ್ಳಿಗೆ ಕರೆದುಕೊಂಡು ಹೋಗಿ ತನ್ನ ಮನೆಯಲ್ಲಿ ಎಲ್ಲರನ್ನೂ ಚಾಪೆಯಮೇಲೆ ಕೂರಿಸಿದನು

ಕ್ಯಾಪ್ಟನ್ ಹಿಂದೆ ಅಲ್ಲಿಗೆ ಬಂದಿದ್ದಾಗ ಅವನಿಗೂ ರೋಮುಟನಿಗೂ ಜಗಳವಾಗಿತ್ತು. ಆದರೂ ರೋಮುಟ ಅಸಮಾಧಾನವನ್ನು ತೋರಿಸದೆ "ನಿಮ್ಮಂಥ ಸ್ನೇಹಿತರು ಮತ್ತೆ ಬಂದದ್ದರಿಂದ ಬಹಳ ಸಂತೋಷ ವಾಯಿತು. ಗಂಧದಮರ ಬೇಕಾದರೆ ತೆಗೆದುಕೊಳ್ಳಬಹುದು. ಮರ ಕಡಿಯುವುದಕ್ಕೆ ಸಹಾಯ ಬೇಕಾದರೆ ಒದಗಿಸುತ್ತೇನೆ." ಎಂದು ಬಹಳ ಮರ್ಯಾದೆಯಿಂದ ಮಾತಾಡಿದನು. ಅನಂತರ ವ್ಯಾಪಾರದ ಷರತ್ತು ಗಳನ್ನು ಗೊತ್ತುಮಾಡಿಯಾಯಿತು. ಬಿಲ್ಲಿಗೆ ಅವರ ಭಾಷೆ ಚೆನ್ನಾಗಿ ಬರುತ್ತಿದ್ದುದರಿಂದ ಅವನು ಇವೆಲ್ಲವನ್ನೂ ನನಗೆ ವಿವರಿಸಿದನು.

ನಾವು ಹಡಗಿಗೆ ಹಿಂತಿರುಗಿದಾಗ ರೋಮುಟನೂ ಜೊತೆಯಲ್ಲೇ ಬಂದು, "ನಮ್ಮ ನೆರೆಯ ದ್ವೀಪದ ಮುಖ್ಯಸ್ಥನಾದ ಭಾರಿ ನಾಯಕ ನೊಬ್ಬ ಈಗ ನನ್ನ ಅತಿಥಿಯಾಗಿ ಬಂದಿದ್ದಾನೆ. ಅವನಿಗಾಗಿ ನಾಳೆ ದೊಡ್ಡ ಔತನ ಏರ್ಪಡಿಸಿದ್ದೇವೆ ನೀವು ಒಪ್ಪುವುದಾದರೆ ನಿಮಗೆ ಅವನ ಪರಿಚಯಮಾಡಿಕೊಡುತ್ತೇನೆ." ಎಂದನು. ಕ್ಯಾಪ್ಟನ್ನನ ಒಪ್ಪಿಗೆ ಪಡೆದು ಆ ನಾಯಕನನ್ನು ಕರೆತರುವುದಕ್ಕೆ ತನ್ನ ದೋಣಿಯನ್ನು ಕಳಿಸಿದನು.

ಹತ್ತು ನಿಮಿಷದಲ್ಲಿ ಆತನೊಡನೆ ದೋಣಿ ವಾಪಸು ಬಂತು. ಆ ನಾಯಕನ ರೂಪ ನೋಡುವುದಕ್ಕೆ ಬಹು ವಿಚಿತ್ರವಾಗಿತ್ತು. ಮುಖದಲ್ಲಿ ಅರ್ಧ ಭಾಗಕ್ಕೆ ಕೆಂಪುಬಣ್ಣ ಬಳಿದಿತ್ತು. ಉಳಿದ ಅರ್ಧಕ್ಕೆ ಹಳದಿಯ ಬಣ್ಣ, ಅದರ ಮೇಲೆ ಕರಿಯ ಬಣ್ಣದಲ್ಲಿ ಏನೇನೋ ಚಿತ್ರಗಳು. ಸ್ವಲ್ಪ ಹೊತ್ತು ಮಾತುಕಥೆ ನಡೆದ ಮೇಲೆ ಕಿರಾತನಾಯಕರಿಬ್ಬರೂ ಹೊರಟು ಹೋದರು.

ಮಾರನೆಯ ದಿನ ನಮ್ಮ ನಾವಿಕರು ಮರ ಕಡಿಯುವುದಕ್ಕೆಂದು ಹೋದರು. ಕ್ಯಾಪ್ಟನ್ ಮಾತ್ರ ತೊಂದರೆಯೇನಾದರೂ ಬಂದರೆ ಎದುರಿಸುವುದಕ್ಕೆ ಸಿದ್ಧನಾಗಿ ಇಬ್ಬರು ನಾವಿಕರನ್ನು ಸಹಾಯಕ್ಕಿಟ್ಟು ಕೊಂಡು ಫಿರಂಗಿಯ ಹತ್ತಿರದಲ್ಲೇ ಕೂತಿದ್ದನು. ಗುಂಡು ಹೊಡೆದರೆ ನಾಯಕನ ಮನೆಗೆ ಸರಿಯಾಗಿ ಬೀಳುವಂತೆ ಫಿರಂಗಿಯನ್ನು ತಿರುಗಿಸಿ ಇಟ್ಟಿದ್ದರು. ದಡಕ್ಕೆ ಹೋದವರೆಲ್ಲರೂ ಎಂದಿನಂತೆ ಆಯುಧಗಳನ್ನು

ತೆಗೆದುಕೊಂಡೇ ಹೋದರು. ನಾನೂ ಅವರ ಜೊತೆಯಲ್ಲೇ ಹೋದೆ.

ಮಾರನೆಯ ದಿನವೂ ನಾನು ಮರ ಕಡಿಯುವವರ ಜೊತೆಯಲ್ಲಿ ದ್ವೀಪಕ್ಕೆ ಹೋಗಬೇಕಾಯಿತು. ಆ ದಿನ ರೋಮಟನು ತನ್ನ ಅತಿಥಿಯನ್ನು ಆದರಿಸುವುದಕ್ಕೆಂದು ಕರೆಯ ಬಳಿ ಈಜುವ ಪಂದ್ಯವನ್ನು ಏರ್ಪಡಿಸಿ ನಮ್ಮೆಲ್ಲರನ್ನೂ ನೋಡಲು ಕರೆದಿದ್ದನು. ನಾನೂ ಬಿಲ್ಲಿಯೂ ದಡದ ಬಳಿ ಹೋಗಿ ನಿಂತೆವು. ಸಾವಿರಾರು ಜನ ಕಿರಾತರು ಅಲ್ಲಿ ಪಂದ್ಯ ನೋಡಲು ನೆರೆದಿದ್ದರು. ಅದರಲ್ಲಿ ಭಾಗವಹಿಸುವವರೇ ಇನ್ನೂರು ಮುನ್ನೂರು ಜನರಿದ್ದರು. ಪ್ರತಿಯೊಬ್ಬನ ಕೈಯಲ್ಲೂ ಒಂದೊಂದು ಹಲಗೆ. ಸಮುದ್ರದಿಂದ ದೊಡ್ಡ ಅಲೆ ಬಂದು ದಡಕ್ಕೆ ಬಡಿದು ಹಿಂದಿರುಗುವ ಸಮಯವನ್ನೇ ಕಾಯುತ್ತಿದ್ದು, ಆ ಕ್ಷಣದಲ್ಲಿ ಎಲ್ಲರೂ ಕಿರಿಚುತ್ತ ಓಡಿ ಹೋಗಿ ನೀರಿಗೆ ಹಾರಿದರು. ನೊರೆ ನೊರೆಯಾಗಿ ಹಿಂದಿರುಗುತ್ತಿದ್ದ ಅಲೆ ಅವರೆಲ್ಲರನ್ನೂ ಸಮುದ್ರಕ್ಕೆ ಎಳೆದುಕೊಂಡು ಹೋಯಿತು. ದ್ವೀಪದ ಸುತ್ತ ಇದ್ದ ಬಂಡೆಯ ಸಾಲು ಆ ಸ್ಥಳದಲ್ಲಿ ದಡವನ್ನು ಮುಟ್ಟಿಕೊಂಡಿತ್ತು. ಆದ್ದರಿಂದ ಅಲೆಗಳು ದಡದವರೆಗೂ ಬಂದು ಭಯಂಕರವಾದ ಆರ್ಭಟದಿಂದ ಅಲ್ಲಿ ಒಡೆಯುವುವು. ಆ ದಿನ ಗಾಳಿ ಸ್ವಲ್ಪ ಬಲವಾಗಿ ಬೀಸುತ್ತಿದ್ದುದರಿಂದ ಅಲೆಗಳು ಎಂದಿಗಿಂತ ದೊಡ್ಡವಾಗಿಯೇ ಏಳುತ್ತಿದ್ದವು. ಈಜುಗಾರರು ಅಲೆಗಳ ಮೇಲೆ ದೊಡ್ಡ ಕರಿಮೀನುಗಳಂತೆ ಬಹುದೂರ ತೇಲಿ ಹೋದರು. ಅನಂತರ ಎಲ್ಲರೂ ದಡದ ಕಡೆ ತಿರುಗಿ ಮತ್ತೊಂದು ಅಲೆ ಬರುವ ಸಮಯವನ್ನು ಕಾದು ಅದರ ತುದಿಯನ್ನೇರಿ, ತಮ್ಮ ಹಲಗೆಯ ಮೇಲೆ ಮೈಯಿಟ್ಟು ಆ ಬೆಟ್ಟದಂಥ ಅಲೆಯ ಮೇಲೆ ಉರುಳುರುಳಿ ದಡದ ಕಡೆಗೆ ತೇಲಿ ಬಂದರು. ನೋಡುತ್ತಿದ್ದವರೆಲ್ಲ ಗಟ್ಟಿಯಾಗಿ ಕಿರಿಚಿ ಅವರಿಗೆ ಉತ್ತೇಜನ ಕೊಡುತ್ತಿದ್ದರು. ಅಲೆ ದಡಕ್ಕೆ ಬಡಿಯುವ ಸಮಯದಲ್ಲಿ ಅವರೆಲ್ಲರೂ ಅದರ ನೆತ್ತಿಯಿಂದ ಹಿಂದಕ್ಕೆ ಜಾರಿಕೊಂಡು ಮತ್ತೆ ಅಲೆಯ ಜೊತೆಯಲ್ಲಿ ಹಿಂದಿರುಗುವರು. ಕೆಲವರು ಸಾಹಸಿಗಳು ಪ್ರಾಣದ ಮೇಲಿನ ಆಸೆಯನ್ನೇ ಬಿಟ್ಟು ಅಲೆ ದಡಕ್ಕೆ ಬಡಿಯುವಾಗಲೂ ಅದರ ನೆತ್ತಿಯ ಮೇಲೇ ಇದ್ದು ಕುದಿಯುವಂತಿದ್ದ ನೊರೆಯೊಡನೆ ಮರಳ

ಮೇಲೆ ಬಂದು ಬೀಳುವರು.

ಇಂಥ ಉತ್ಸಾಹಿಗಳಲ್ಲೊಬ್ಬನು ನಾನೂ ಬಿಲ್ಲಿಯೂ ನಿಂತಿದ್ದ ಸ್ಥಳದಲ್ಲಿಯೇ ಬಂದು ನಿಂತನು. ಕೂದಲು ಕಟ್ಟಿಕೊಂಡಿದ್ದ ರೀತಿಯನ್ನು ನೋಡಿದರೆ ಅವನು ನಾಯಕ ವರ್ಗಕ್ಕೆ ಸೇರಿದವನೆಂದು ಕಾಣುತ್ತಿತ್ತು. ಅವನೇ ಹಿಂದಿನ ದಿನ ಹಡಗಿಗೆ ಬಂದಿದ್ದ ರೋಮಟಿನ ಅತಿಥಿಯೆಂದು ಗುರುತಿಸಿದೆ. ಬಹಳ ಹೊತ್ತು ನೀರಿನಲ್ಲಿದ್ದುದರಿಂದ ಅವನು ಮುಖಕ್ಕೆ ಬಳಿದುಕೊಡಿದ್ದ ಬಣ್ಣ ಮುಕ್ಕಾಲುಪಾಲು ಅಳಿಸಿಹೋಗಿತ್ತು. ಏದುತ್ತ ನೀರಿನಿಂದ ಎದ್ದಾಗ ನಾನು ಅವನ ಮುಖ ನೋಡಿದರೆ—ಟರಾರ! ಹವಳದ ದ್ವೀಪದಲ್ಲಿ ನಮ್ಮ ಸಹಾಯದಿಂದ ಬದುಕಿದವನು! ಅವನೂ ನನ್ನನ್ನು ಗುರುತಿಸಿ ಓಡಿಬಂದು ನನ್ನ ಮುಖ ಹಿಡಿದುಕೊಂಡು ಮೂಗು ಉಜ್ಜಿದ. ಅವನ ಮುಖದಲ್ಲಿದ್ದ ಒದ್ದೆ ಬಣ್ಣ ನನ್ನ ಮೂಗಿಗೂ ಸ್ವಲ್ಪ ಬಂತು. ಅನಂತರ ಟರಾರನಿಗೆ ನಾವು ಕೈ ಕುಲುಕುತ್ತಿದ್ದದ್ದು ನೆನಪಾಯಿತು. ನನ್ನ ಕೈಗಳೆರಡನ್ನೂ ಹಿಡಿದು ಎಂಟು ಹತ್ತುಸಾರಿ ಕುಲುಕಿದ.

ಬಿಲ್ಲಿಗೆ ಆಶ್ಚರ್ಯವಾಯಿತು. "ಇದೇನು ರೋವರ್, ಇವನಿಗೇನೋ ನಿನ್ನಮೇಲೆ ಎಲ್ಲೂ ಇಲ್ಲದ ಸ್ನೇಹ ಹುಟ್ಟಿದ ಹಾಗೆ ಕಾಣುತ್ತೆ? ಅಥವಾ ನಿಮ್ಮಿಬ್ಬರಿಗೂ ಹಿಂದಿನ ಗುರುತೇನಾದರೂ ಇತ್ತೋ ?"

"ನಿಜ, ಬಿಲ್ಲಿ. ನಾವು ಹಳೆಯ ಸ್ನೇಹಿತರು." ಎಂದು ನಾನು ಹಿಂದಿನ ಕಥೆಯನ್ನೆಲ್ಲಾ ಹೇಳಿದೆ. ಟರಾರ ತನ್ನ ಹಲಗೆಯನ್ನು ಎಸೆದು ಬಿಲ್ಲಿಯೊಡನೆ ಮಾತನಾಡಲು ಪ್ರಾರಂಭಿಸಿದ. ನಿಮಿಷ ನಿಮಿಷಕ್ಕೂ ನನ್ನ ಕಡೆ ಕೈತೋರಿಸುತ್ತಿದ್ದ. ಅವನು ಮಾತು ನಿಲ್ಲಿಸಿದಾಗ ನಾನು ಬಿಲ್ಲಿಗೆ "ಆವತಿ ಎಲ್ಲಿದ್ದಾಳೆ, ಕೇಳು" ಎಂದೆ. ಅವಳ ಹೆಸರನ್ನು ಕೇಳಿದೊಡನೆ ಟರಾರನ ಮುಖ ಗಂಟಿಕ್ಕಿಕೊಂಡಿತು. ಕೋಪದಿಂದ ಏನೋ ಹೇಳಿದ. ಅವಳನ್ನು ಯಾರಿಗೋ ಕೊಟ್ಟು ಮದುವೆ ಮಾಡಬೇಕೆಂದು ಟರಾರ ನಿಶ್ಚಯಿಸಿದ್ದನಂತೆ. ಆದರೆ ಅವಳು ಟರಾರನ ಶತ್ರುವಾದ ಇನ್ನೊಬ್ಬ ಯುವಕನಲ್ಲಿ ಮೋಹಗೊಂಡದ್ದರಿಂದ ಟರಾರನ ಮಾತಿಗೆ ಒಪ್ಪಲಿಲ್ಲವಂತೆ. ತಾನು ಮತ್ತೆ ತನ್ನ ದ್ವೀಪವನ್ನು ಸೇರುವುದರಲ್ಲಿ ಅವಳು ಮನಸ್ಸು

ಬದಲಾಯಿಸಿದರೆ ಸರಿ; ಇಲ್ಲದಿದ್ದರೆ ಅವಳನ್ನು ಕೊಂದು ಹಾಕಬೇಕೆಂದು ನಿಶ್ಚಯಿಸಿದ್ದನಂತೆ.

"ಆವತಿ ಈಗ ಇಲ್ಲಿದ್ದಾಳೆಯೆ ಕೇಳು."

"ಇಲ್ಲ. ಟರಾರನ ದ್ವೀಪದಲ್ಲೇ ಇದ್ದಾಳಂತೆ."

"ಅದು ಇಲ್ಲಿಗೆ ಎಷ್ಟು ದೂರ? ಯಾವ ಕಡೆ ಇದೆ?"

"ದಕ್ಷಿಣಕ್ಕೆ, ಸುಮಾರು ಅರುವತ್ತು ಮೈಲಿ."

೧೨

## ಕ್ಯಾಪ್ಟನ್ನನ ಸಭ್ಯ ವ್ಯಾಪಾರ

ಇದಾದ ನಾಲ್ಕನೆಯ ದಿನ ಬೆಳಗ್ಗೆ ನನಗೆ ಆರೋಗ್ಯ ಸರಿಯಾಗಿ ರಲಿಲ್ಲ; ಸ್ವಲ್ಪ ಜ್ವರ ಬಂದಹಾಗಿತ್ತು. ಮರ ಕಡಿಯುವವರನ್ನು ಕಳುಹಿಸುವುದಕ್ಕೆ ಕ್ಯಾಪ್ಟನ್ ಮೇಲೆ ಬಂದಾಗ ನನಗೆ ಮೈ ಚೆನ್ನಾಗಿಲ್ಲವೆಂದೂ ಅವರೊಡನೆ ಹೋಗುವುದಕ್ಕಾಗುವುದಿಲ್ಲವೆಂದೂ ಹೇಳಿದೆ. ಅವನು ದುರುಗುಟ್ಟಿಕೊಂಡು ನೋಡಿ ಕೋಪದಿಂದ "ಅದೆಲ್ಲಾ ಆಗುವುದಿಲ್ಲ. ಎಲ್ಲರೂ ಹೋಗಲೇಬೇಕು." ಎಂದನು. ಒಂದೆರಡು ದಿನದಿಂದ ಕ್ಯಾಪ್ಟನ್ ಎಲ್ಲರ ಮೇಲೂ ರೇಗಿ ಬೀಳುತ್ತಿದ್ದನು ಅವನಿಗೂ ರೋಮಟನಿಗೂ ಸ್ವಲ್ಪ ಅಸಮಾಧಾನ ಬಂದು ರೋಮಟ "ಹೆಚ್ಚು ಮಾತಾಡಿದರೆ ಒಂದು ಸಾವಿರ ಜನ ಯೋಧರನ್ನು ಕಳಿಸಿ ನಿಮ್ಮ ಹಡಗನ್ನು ಸುಟ್ಟುಬಿಡುತ್ತೇನೆ." ಎಂದಿದ್ದನಂತೆ.

ಆ ದಿನ ಸಂಜೆ ಕ್ಯಾಪ್ಟನ್ನನೂ ಅವನ ಕೈಕೆಳಗಿನ ಅಧಿಕಾರಿಯೂ ಮೆಲ್ಲನೆ ಏನೋ ಮಾತಾಡುತ್ತಿದ್ದರು. ಆದರೆ ಅವರ ಕೋಣೆಯ ಬಾಗಿಲು ತೆಗೆದಿದ್ದುದರಿಂದ ನನಗೆ ಪ್ರತಿಯೊಂದು ಶಬ್ದವೂ ಸ್ಪಷ್ಟವಾಗಿ ಕೇಳುತ್ತಿತ್ತು.

"ನನಗೇನೋ ನೀವು ಹೇಳುವುದು ಒಪ್ಪಿಗೆಯಿಲ್ಲ. ಯುದ್ಧ ಮಾಡಿದ ಹಾಗಾಯಿತೇ ಹೊರತು ಅದಕ್ಕೆ ಪ್ರತಿಫಲ ಸಿಕ್ಕುವುದಿಲ್ಲ." ಎಂದ, ಅಧಿಕಾರಿ.

"ಪ್ರತಿಫಲ ಸಿಕ್ಕುವುದಿಲ್ಲವೆ!" ಕ್ಯಾಪ್ಟನ್ ಬಹಳ ಕೋಪದಿಂದ

ಕೇಳಿದೆ. " ಹಡಗಿನ ತುಂಬ ಗಂಧದ ಮರ ಬಂದರೆ ಅದು ಫಲವಲ್ಲ ವೇನು ? "

" ನಿಜ; ಅದರೆ ಈಗಾಗಲೇ ಮರವನ್ನು ತುಂಬಿಕೊಂಡಿದ್ದೇವಲ್ಲ ? ಹೇಳದೆ ಕೇಳದೆ ನಮ್ಮ ಪಾಡಿಗೆ ನಾವು ಹೊರಟುಹೋಗಬಹುದು."

" ಹಾಗಲ್ಲ; ನಾವು ಕಡಿದ ಮರ ಎಲ್ಲವನ್ನೂ ಹಡಗಿಗೆ ತಂದಿಲ್ಲ. ಕಾಲುಭಾಗ ಇನ್ನೂ ಕಾಡಿನಲ್ಲೇ ಬಿದ್ದಿದೆ. ಆ ಕೊರವು ರೋಮಟಿ 'ಅದನ್ನು ಕೊಡುವುದಿಲ್ಲ, ಏನು ಮಾಡುತ್ತೀರಿ ನೋಡೋಣ' ಎನ್ನುತ್ತಿದ್ದಾನೆ."

" ಓಹೋ, ಆ ಕುನ್ನಿಗೆ ಅಷ್ಟೊಂದು ಧೈರ್ಯ ಬಂತೆ ? "

" ಅವನ ಮೇಲೆ ನುಗ್ಗೋಣವೆಂದರೆ ನೀನು ಸಹ ಹೆದರುತ್ತಾ ಇದ್ದೀಯೆ ! ನಾವು ಹೆದರಿದರೆ ಅವನಿಗೆ ಧೈರ್ಯ ಬರದೆ ಮತ್ತೇನು ! "

" ನನಗೇನೂ ಹೆದರಿಕೆಯಿಲ್ಲ. ಈಗ ಏನು ಮಾಡಬೇಕೆನ್ನುತ್ತೀರಿ, ಕ್ಯಾಪ್ಟನ್ ? "

" ರಾತ್ರಿ ನಮ್ಮ ಹುಟ್ಟುಗಳು ಸದ್ದು ಮಾಡದಂತೆ ಅವಕ್ಕೆ ಬಟ್ಟೆ ಕಟ್ಟಿ ಹಡಗನ್ನು ಕೊಲ್ಲಿಯುವರೆಗೂ ತೆಗೆದುಕೊಂಡು ಹೋಗುವುದು. ದೋಣಿಯನ್ನು ಕಾಯುವುದಕ್ಕೆ ಇಬ್ಬರನ್ನು ಬಿಟ್ಟು ಉಳಿದವರೆಲ್ಲರೂ ಬಂದೂಕು ತೆಗೆದುಕೊಂಡು ಕತ್ತಲೆಯಲ್ಲಿ ಸದ್ದುಮಾಡದೆ ಹಳ್ಳಿಗೆ ಹೋಗುವುದು. ಅಲ್ಲಿ ಕಿರಾತರೆಲ್ಲಾ ಬೆಂಕಿಯ ಸುತ್ತ ಸೇರಿರುತ್ತಾರೆ. ನಾವೆಲ್ಲ ಗುಂಡು ಹಾರಿಸಿದರೆ ಮೊದಲನೆಯ ಸಲವೇ ನಲವತ್ತು ಜನರನ್ನು ಉದುರಿಸಬಹುದು. ಅಲ್ಲಿಂದಾಚೆಗೆ ನಮ್ಮ ಕೆಲಸ ಸುಲಭ. ಉಳಿದ ಕಿರಾತರೆಲ್ಲಾ ಹೆದರಿ ಓಡಿ ಹೋಗುತ್ತಾರೆ. ನಾವು ಬೇಕಾದಷ್ಟು ಮರ ತೆಗೆದುಕೊಂಡು ಹೊರಡುವುದು."

ಅವರ ಅನ್ಯಾಯವೂ ಕ್ರೂರವೂ ಆದ ತಂತ್ರವನ್ನು ಕೇಳಿ ನನಗೆ ಮೈನಡುಗಿತು.

ಮಧ್ಯರಾತ್ರಿಯ ಸಮಯ ಬಂತು. ಸ್ವಲ್ಪವೂ ಸದ್ದಾಗದಂತೆ ಹಡಗನ್ನು ಕೊಲ್ಲಿಯೊಳಕ್ಕೆ ಸ್ವಲ್ಪ ದೂರ ನಡೆಸಿಕೊಂಡು ಹೋದೆವು. ಆ ಕೊಲ್ಲಿ ಒಂದು ಸಣ್ಣ ನದಿಯ ಅಳಿವೆ. ನದಿಯ ಪ್ರವಾಹ ಜೋರಾ

ಗಿದ್ದುದಲ್ಲದೆ ಎರಡು ಕಡೆಗಳಿಂದಲೂ ಮರದ ಕೊಂಬೆಗಳು ಬಾಗಿದ್ದುದರಿಂದ ಹುಟ್ಟುಹಾಕುವವರಿಗೆ ಸ್ವಲ್ಪ ಅಡಚಣೆಯಾಗಿ ಆರು ನೂರು ಗಜ ಹೋಗುವುದಕ್ಕೆ ಅರ್ಧಘಂಟೆ ಹಿಡಿಯಿತು. ಅನಂತರ ಹಡಗನ್ನು ನಿಲ್ಲಿಸಿ ನಾವಿಕರೆಲ್ಲರೂ ನಿಶ್ಶಬ್ದವಾಗಿ ಇಳಿದು ದೋಣಿಗೆ ತುಂಬಿಕೊಂಡರು. ಯಾವ ತೊಂದರೆಯೂ ಇಲ್ಲದೆ ದಡವನ್ನು ಸೇರಿದ್ದಾಯಿತು.

"ಜೋಕೆ, ಯಾರೂ ಆತುರಪಡಬೇಡಿ. ಸದ್ದಿಲ್ಲದೆ ನಡೆಯಬೇಕು. ಗುಂಡು ಹಾರಿಸುವಾಗ ಎತ್ತರದಲ್ಲಿ ಗುರಿಯಿಡಬೇಡಿ. ಒಂದೇ ಒಂದು ಗುಂಡೂ ವ್ಯರ್ಥವಾಗಬಾರದು." ಎಂದು ಕ್ಯಾಪ್ಟನ್ ಪಿಸುಮಾತಿನಲ್ಲಿ ಎಚ್ಚರಿಕೆಕೊಟ್ಟನು.

ಇನ್ನೊಬ್ಬ ನಾವಿಕ "ದೋಣಿಯಲ್ಲಿ ಒಬ್ಬರು ಕಾದಿದ್ದರೆ ಸಾಕಲ್ಲವೆ? ರೋವರ್ ಬಬ್ಬನನ್ನು ಬಿಟ್ಟುಹೋಗೋಣ'' ಎಂದನು.

ಕ್ಯಾಪ್ಟನ್ ಅದಕ್ಕೆ ಒಪ್ಪಿ "ರೋವರ್, ಹುಟ್ಟನ್ನು ಕೈಯಲ್ಲಿ ಹಿಡಿದುಕೊಂಡೇ ಕೂತಿರು. ನಾವು ವಾಪಸು ಬಂದ ಕ್ಷಣವೇ ಹೊರಡುವುದಕ್ಕೆ ಸಿದ್ಧನಾಗಿರಬೇಕು. ಕಿರಾತರೇನಾದರೂ ಬರುವ ಸದ್ದು ಕೇಳಿದರೆ ದೋಣಿಯನ್ನು ಹಿಂದಕ್ಕೆ ತೆಗೆದುಕೊಂಡು ಹೋಗಿ ನಾಲ್ಕು ಗಜ ದೂರದಲ್ಲಿರಬೇಕು" ಎಂದು ಅಪ್ಪಣೆಮಾಡಿದನು. ಅನಂತರ ಎಲ್ಲರೂ ಹೊರಟು ಮರುಕ್ಷಣವೇ ಕತ್ತಲೆಯಲ್ಲಿ ಮರೆಯಾದರು. ಅವರು ಹಳ್ಳಿಯ ಹತ್ತಿರ ಹೋಗಬೇಕಾದರೆ ಕಾಲುಘಂಟೆಯಾಗಬೇಕು. ಅಲ್ಲಿಯವರೆಗೂ ಯಾವ ಸದ್ದೂ ಕೇಳುವಂತಿರಲಿಲ್ಲ. ಕಿರಾತರಿಗಿಂತಲೂ ನೂರುಪಾಲು ಕ್ರೂರಿಗಳಾದ ಇವರ ಜೊತೆಯಲ್ಲಿ ಸಿಕ್ಕಿಬಿದ್ದೆನಲ್ಲ ಎಂದು ನನಗೆ ವ್ಯಸನ; ನಮ್ಮವರೇನಾದರೂ ಯುದ್ಧದಲ್ಲಿ ಸೋತರೆ ನನ್ನ ಗತಿಯೇನು ಎಂಬ ನಡುಕ ಬೇರೆ.

ಒಂದೆರಡು ನಿಮಿಷಗಳೂ ಕಳೆದಿರಲಿಲ್ಲ. ಹಠಾತ್ತಾಗಿ ಗುಂಡಿನ ಶಬ್ದ ಕೇಳಿಸಿತು. ಕೂಡಲೆ ಹಳ್ಳಿಯ ಜನರೆಲ್ಲಾ ಭಯಂಕರವಾಗಿ ಕೂಗಿಕೊಂಡರು. ಜನರ ಗುಂಪುಗಳು ಮಾತಾಡಿಕೊಂಡು ಕಾಡಿನೊಳಕ್ಕೆ ನುಗ್ಗುವ ಸದ್ದು ಕೇಳಿಸಿತು. ಇನ್ನೂ ಸ್ವಲ್ಪ ಹತ್ತಿರದಲ್ಲಿ ಕ್ಯಾಪ್ಟನ್ನನ

ಮಾತು ಕೇಳಿಸಿತು. ಸಮಯಕ್ಕೆ ಮುಂಚಿತವಾಗಿ ಗುಂಡುಹಾರಿಸಿದವನನ್ನು ಶಪಿಸುತ್ತಿದ್ದನು. ಆಮೇಲೆ "ಭಯಪಡದೆ ಮುಂದೆ ನುಗ್ಗಿ" ಎಂದು ಗರ್ಜಿಸಿದನು. ಕೂಡಲೆ ಯುದ್ಧ ಪ್ರಾರಂಭವಾಯಿತು. ಕ್ಷಣಕ್ಕೊಂದು ಸಲ ಗುಂಡುಗಳ ಸದ್ದು; ಸಾಯುವ ಕಿರಾತರ ಕಿರಿಚಾಟ; ನಮ್ಮವರ ಗರ್ಜನೆ. ಸದ್ದುಗಳು ಬಂದ ರೀತಿಯನ್ನು ನೋಡಿದರೆ ಅದುವರೆಗೆ ನಮ್ಮವರ ಕೈ ಮೇಲಾಗಿದ್ದಂತೆ ತೋರಿತು.

ನನ್ನ ಗಮನವೆಲ್ಲಾ ಹಳ್ಳಿಯ ಕಡೆಯಿಂದ ಬಂದ ಸದ್ದಿನ ಮೇಲೆಯೇ ಇತ್ತು. ಇದ್ದಕಿದ್ದ ಹಾಗೆ ನಾನಿದ್ದ ಸ್ಥಳದಿಂದ ಹತ್ತು ಹನ್ನೆರಡು ಮಾರು ದೂರದಲ್ಲಿ ಮರದ ಎಲೆಗಳನ್ನು ತಳ್ಳಿಕೊಂಡು ಜನರು ನುಗ್ಗಿದ ಸದ್ದಾಯಿತು. ನಮ್ಮ ಹಡಗೇನಾದರೂ ಕಿರಾತರ ದೃಷ್ಟಿಗೆ ಬಿದ್ದಿತೇನೋ ಎಂದು ನನಗೆ ಭಯವಾಯಿತು. ಆದರೆ ಆ ಕಿರಾತರ ಗುಂಪು ಹಡಗಿನ ಕಡೆ ಬರಲಿಲ್ಲ. ಹಳ್ಳಿಯಿಂದ ಹೊರಟು ಕಾಡನ್ನು ಸುತ್ತಿ ಬಂದು ಈಗ ಮತ್ತೆ ಹಳ್ಳಿಯ ಕಡೆಗೇ ಓಡುತ್ತಿದ್ದರು ಕತ್ತಲಿನಲ್ಲಿ ನನಗೆ ಅಲ್ಪಸ್ವಲ್ಪ ಕಂಡಮಟ್ಟಿಗೆ ಆ ಗುಂಪಿನಲ್ಲಿ ಐನೂರು ಆರು ನೂರು ಜನರಿದ್ದಿರಬಹುದು ನಮ್ಮ ಕಡೆಯವರಿಗೆ ತಿಳಿಯದಂತೆ ಹಿಂದಿನಿಂದ ಹೋಗಿ ಅವರನ್ನು ನಾಶಮಾಡುವುದೇ ಈ ಕಿರಾತರ ಉದ್ದೇಶವಿರಬಹುದು ಎಂದುಕೊಂಡೆ. ನನ್ನ ಯೋಚನೆ ನಿಜವಾಯಿತು. ಕಾಲುಘಂಟೆಯೊಳಗಾಗಿ ನಮ್ಮವರು ಎರಡುಕಡೆಗಳಲ್ಲೂ ಇದ್ದ ಕಿರಾತರ ನಡುವೆ ಸಿಕ್ಕಿಬಿದ್ದರು. ಜನರ ಕೂಗು ಇಮ್ಮಡಿಯಾಯಿತು. ನಡು ನಡುವೆ ನಮ್ಮವರು ಸಾಯುವಾಗ ಕೂಗಿಕೊಂಡದ್ದೂ ಕೇಳುತ್ತಿತ್ತು.

ಅಲ್ಲಿಂದಾಚೆಗೆ ಯುದ್ಧ ಬೇಗಲೇ ಕೊನೆಗೂಂಡಿತು. ಗುಂಡಿನ ಶಬ್ದ ಕೇಳಲೇ ಇಲ್ಲ. ಕಿರಾತರು ಗಂಟಲು ಒಡೆಯುವಂತೆ ಉತ್ಸಾಹದಿಂದ ಮತ್ತರಾಗಿ ಕೂಗುತ್ತಿದ್ದರು. ನಾವಿಕರೆಲ್ಲರೂ ಸೋತುಹೋಗಿರಬೇಕು, ಸಂದೇಹವೇ ಇಲ್ಲ. ನನ್ನ ಸ್ಥಿತಿ ಭಯಾನಕವಾದದ್ದು. ಏನು ಮಾಡಬೇಕೋ ತೋರದೆ ಹಡಗಿಗೆ ಹಿಂದಿರುಗೋಣವೆಂದು ಕೈಗೆ ಹುಟ್ಟು ತೆಗೆದುಕೊಳ್ಳುವುದರಲ್ಲಿದ್ದೆ. ಆ ಸಮಯದಲ್ಲಿ ನಾವಿಕನೊಬ್ಬ ಸಾಯುವಂತೆ ಚೀರಿಕೊಂಡದ್ದು ಕೇಳಿತು. ಅದರ ಹಿಂದೆಯೇ ಕಿರಾತರ ಗರ್ಜನೆಯೂ

ಕೇಳಿಬಂತು. ಅನಂತರ ಒಂದಾದಮೇಲೆ ಒಂದು ನಾವಿಕರ ಆರ್ತ ನಾದ. ನಮ್ಮವರ ಗತಿಯೇನೆಂಬುದು ಸ್ಪಷ್ಟವಾಯಿತು. ನನ್ನ ಮನಸ್ಸಿನಲ್ಲಿ ಭಯ, ಮರುಕ, ಕೋಪ—ಎಲ್ಲವೂ ತೆರೆತೆರೆಯಾಗಿ ಬಂದು ಹೋದುವು. ಹೃದಯ ಒಡೆದುಹೋಗುವಷ್ಟು ವೇಗವಾಗಿ ನನ್ನ ರಕ್ತ ಚಲಿಸುತ್ತಿತ್ತು. ನಮ್ಮ ಕಡೆಯವರನ್ನು ಉಳಿಸುವಂತಿಲ್ಲ; ಅಲ್ಲಿಯೇ ಕಾದಿದ್ದರೆ ನಾನೂ ಬದುಕುವಂತಿಲ್ಲ. ಹಡಗಿನ ಕಡೆಗೆ ದೋಣಿಯನ್ನು ತಿರುಗಿಸಬೇಕೆಂದು ಹುಟ್ಟು ತೆಗೆದುಕೊಂಡೆ. ಆ ಸಮಯದಲ್ಲಿ ಯಾರೋ ಒಬ್ಬರು ದೋಣಿಯ ಬಳಿಗೆ ನೆಗೆದು ಬಂದರು.

"ತಾಳು, ರೋವರ್, ತಾಳು, . . . . ಸರಿ, ಇನ್ನು ನಡಿ, ಹೋಗೋಣ."

ಬಂದವನು ಬಿಲ್ಲಿ. ಅವನು ದೋಣಿಗೆ ಹಾರಿದ ರಭಸದಿಂದಲೇ ಅದು ದಡದಿಂದ ನಾಲ್ಕು ಮಾರು ಮುಂದೆ ಹೋಯಿತು. ಎರಡು ನಿಮಿಷ ಕಳೆಯುವುದರೊಳಗೆ ನಾವು ಹಡಗುಹತ್ತಿ ಕೊಲ್ಲಿಯಿಂದ ಸಮುದ್ರದ ಕಡೆಗೆ ಹೊರಟೆವು. ಬಿಲ್ಲಿಯ ಕೂಗನ್ನು ಕೇಳಿದ ನೂರಾರು ಕಿರಾತರು ನಮ್ಮನ್ನು ಹಿಡಿಯಬೇಕೆಂದು ಕೊಲ್ಲಿಯ ತುದಿಯಕಡೆ ಓಡಿದರು. ಕೆಲವರು ನೀರಿಗೆ ಬಿದ್ದು ನಮ್ಮ ಕಡೆಗೆ ಈಜಿಬಂದರು. ಅವರೇನೋ ನಮ್ಮನ್ನು ಹಿಡಿಯಲಾರದಿದ್ದರೂ ಕೊಲ್ಲಿಯ ದ್ವಾರದಲ್ಲಿ ನಿಂತಿದ್ದ ಗುಂಪಿನಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವಾಗಿ ತೋರಿತು. ಅವರೇನಾದರೂ ಹಡಗು ಹತ್ತಿದರೆ ನಮ್ಮ ಆಸೆ ಮುಗಿಯಿತು. ಬಿಲ್ಲಿ ಒಂದು ಕ್ಷಣ ಯೋಚನೆಮಾಡಿ ಫಿರಂಗಿಯ ಬಳಿಗೆ ನೆಗೆದು ಮದ್ದಿಗೆ ಬೆಂಕಿ ತೋರಿಸಿ ಹಾರಿಸಿದ. ಅದು ಬಾಯಿಂದ ಉರಿಯನ್ನು ಕಾರಿ ದ್ವೀಪವೆಲ್ಲಾ ನಡುಗುವಂತೆ ಗರ್ಜಿಸಿತು. ಗುಂಡಿಗೆ ಸಿಕ್ಕಿ ಎಷ್ಟು ಜನ ಕಿರಾತರು ಸತ್ತರೋ ಅಥವಾ ಯಾರೂ ಸಾಯಲೇ ಇಲ್ಲವೋ ನಮಗೆ ತಿಳಿಯದು. ಆದರೆ ಆ ಗರ್ಜನೆಯನ್ನು ಕೇಳಿ ಅವರೆಲ್ಲಾ ಒಂದು ನಿಮಿಷ ಬೆಚ್ಚಿ ನಿಂತರು. ಅಷ್ಟು ಅವಕಾಶ ನಮಗೆ ಸಾಕಾಯಿತು. ಕಿರಾತರು ಧೈರ್ಯತಂದುಕೊಳ್ಳುವುದರೊಳಗೆ ನಾವು ಕೊಲ್ಲಿಯನ್ನು ದಾಟಿ ಸಮುದ್ರವನ್ನು ಸೇರಿದೆವು. ಬಲವಾಗಿ ಬೀಸುತ್ತಿದ್ದ ಗಾಳಿ

ನಮ್ಮ ಪಟಗಳನ್ನು ತುಂಬಿ ಹಡಗನ್ನು ವೇಗವಾಗಿ ಸಾಗಿಸಿತು. ಕಿರಾತರ ಕೂಗು ನಿಮಿಷ ನಿಮಿಷಕ್ಕೂ ಕಡಿಮೆಯಾಗುತ್ತ ಬಂತು.

೧೩

## ಮತ್ತೆ ಹವಳದ ದ್ವೀಪಕ್ಕೆ

ಪೆಸಿಫಿಕ್ ಸಾಗರದ ತಣ್ಣನೆಯ ಗಾಳಿ ದಣಿದಿದ್ದ ನನ್ನ ಮೈ ಮೇಲೆ ಹಿತಕರವಾಗಿ ಬೀಸಿತು. ಹಡಗಿನ ಪಕ್ಕಗಳಲ್ಲಿ ಅಲೆಗಳ ಸದ್ದು ಇಂಪಾದ ಸಂಗೀತದಂತೆ ಕಿವಿಗೆ ಆನಂದ ಕೊಟ್ಟಿತು. ಕ್ಯಾಪ್ಟನ್ನನ ಕುತಂತ್ರದ ಫಲವಾಗಿ ಅವನನ್ನೂ ನಮ್ಮ ನಾವಿಕರನ್ನೂ ಬಲಿತೆಗೆದು ಕೊಂಡ ಏಮೋ ದ್ವೀಪ ಹಿಂದೆ ಬಿತ್ತು. ಕಿರಾತರ ಭಯವಿರುವವರೆಗೂ ನನಗೆ ಅನಾರೋಗ್ಯದ ನೆನಪೇ ಮರೆತುಹೋಗಿತ್ತು. ಅದುವರೆಗೆ ಹೇಗೋ ತಡೆದುಕೊಂಡಿದ್ದ ನನ್ನ ಶರೀರಸ್ಥಿತಿ ಅಪಾಯ ಕಳೆದ ಮೇಲೆ ಇದ್ದಕ್ಕಿದ್ದ ಹಾಗೇ ಕುಸಿದುಬಿತ್ತು. ಮೂರ್ಛೆ ಹೋಗಿ ಹಡಗಿನ ಮೇಲಟ್ಟದ ಮೇಲೆ ಒರಗಿದೆ.

ಎಚ್ಚೆತ್ತಾಗ ಬಿಲ್ಲಿ ಬಹಳ ಮೃದುವಾಗಿ ಮಾತಾಡುತ್ತ ನನಗೆ ಉಪಚಾರಮಾಡುತ್ತಿದ್ದ.

" ರೋವರ್, ಇನ್ನೇನೂ ಭಯವಿಲ್ಲ, ಕೊಲ್ಲಿಯನ್ನು ದಾಟ ಬಂದಿದ್ದೇವೆ, ಏಳಪ್ಪ....ಪಾಪ, ಹುಡುಗ ಮೂರ್ಛೆ ಹೋಗಿದ್ದಾನೆ."

ಅಟ್ಟದ ಮೇಲೆ ಒಂದು ಹಾಸಿಗೆ ತಂದು ಹಾಸಿ ನನ್ನನ್ನು ಮಗುವಿನಂತೆ ಎತ್ತಿಕೊಂಡು ಹೋಗಿ ಅದರ ಮೇಲೆ ಮಲಗಿಸಿದ.

" ಎಲ್ಲಿ, ಇದನ್ನು ಸ್ವಲ್ಪ ಕುಡಿ ನೋಡೋಣ. ಹೆದರಬೇಡ, ಹೆದರಬೇಡ, ಇದನ್ನು ಕುಡಿದರೆ ಬೇಗ ಚೇತರಿಸಿಕೊಳ್ಳುತ್ತೀಯೆ.'' ಆ ಒರಟು ನಾವಿಕನ ದನಿ ಮಗುವನ್ನು ಸಂತೈಸುವ ತಾಯಿಯ ದನಿಯಂತೆ ಮೃದುವಾಗಿತ್ತು. ಲೋಟದಲ್ಲಿ ಸ್ವಲ್ಪ ಬ್ರಾಂದಿಯನ್ನು ನನ್ನ ಬಾಯಿಗೆ ಹಿಡಿದನು. ನಾನು ಕೃತಜ್ಞತೆಯಿಂದ ಅದನ್ನು ಕುಡಿದೆ. ಒಡನೆಯೇ ನನ್ನ ಕಣ್ಣು ಎಳೆದುಕೊಂಡು ಹೋದಂತಾಗಿ ಒಂದು ನಿಮಿಷ ಕಳೆಯುವುದರೊಳಗೆ ಚೆನ್ನಾಗಿ ನಿದ್ದೆ ಬಂತು. ಬಹಳ ಹೊತ್ತು ನಿದ್ದೆ ಮಾಡಿದ

ಬೇಕು; ಎದ್ದಾಗ ಸೂರ್ಯ ನೆತ್ತಿಯವರೆಗೂ ಬಂದಿದ್ದ.

ಬಿಲ್ಲಿ ನನ್ನ ಕಾಲ ಬಳಿಯಲ್ಲಿ ಬಲದೋಳನ್ನೇ ತಲೆದಿಂಬು ಮಾಡಿಕೊಂಡು ನಿದ್ದೆ ಮಾಡುವವನಂತೆ ಮಲಗಿದ್ದ.

"ಎದ್ದೆಯಾ ಮಗು? ಬಹಳ ಹೊತ್ತು ಮಲಗಿದ್ದೆ. ಚೆನ್ನಾಗಿ ನಿದ್ದೆ ಬಂತಲ್ಲವೆ? ಈಗ ಹೇಗಿದೆ?''

ಕತ್ತೆತ್ತಿ ಅವನ ಮುಖ ನೋಡಿ ಭಯದಿಂದ ಬೆಚ್ಚಿಬಿದ್ದೆ. ಅವನ ಮುಖವೆಲ್ಲಾ ಬಿಳಿಚಿಕೊಂಡಿತ್ತು. ಕೆದರಿ ಮುಖದ ಮೇಲೆಲ್ಲಾ ಇಳಿಯ ಬಿದ್ದಿದ್ದ ಕೂದಲು ರಕ್ತದಲ್ಲಿ ನೆನೆದು, ಗೋಜಿ ಗಂಟ್ಟುಕಟ್ಟಿಕೊಂಡಿತ್ತು. ಕೆನ್ನೆಗಳ ಮೇಲೂ ಷರಟಿನ ಮುಂಭಾಗದಲ್ಲೂ ರಕ್ತ ಹರಿದಿತ್ತು. ಬಟ್ಟೆಯೆಲ್ಲಾ ಹರಿದು ಮಣ್ಣುಮುಕ್ಕಿತ್ತು.

"ಬಿಲ್ಲಿ, ಇದೇಕೆ ಹೀಗಿದ್ದೀಯೆ? ನಿನಗೆ ಗಾಯವಾಗಿರಬೇಕು. ನನಗಿಂತಲೂ ನಿನಗೇ ಹೆಚ್ಚು ನಿಶ್ಯಕ್ತಿಯಾಗಿರಬೇಕು!"

ನಾನು ಬಿಟ್ಟಿದ್ದ ಹಾಸಿಗೆಯ ಮೇಲೆ ಬಿಲ್ಲಿ ಮಲಗಿಕೊಂಡ. ಆ ದೊಡ್ಡ ದೇಹದಲ್ಲಿ ಏನೇನೂ ಶಕ್ತಿಯಿರಲಿಲ್ಲ.

"ನಿಜ, ಮಗು. ನಿನ್ನೆಯ ದಿನ ನನಗೆ ಬಲವಾದ ಪೆಟ್ಟು ಬಿತ್ತು. ಗಾಯ ಸ್ವಲ್ಪ ಅಪಾಯಕರವಾದದ್ದೇ. ಉಗ್ರಾಣಕ್ಕೆ ಹೋಗಿ ನನಗೆ ಸ್ವಲ್ಪ ರೊಟ್ಟಿಯನ್ನೂ ಬ್ರಾಂದಿಯನ್ನೂ ತಂದುಕೊಡುತ್ತೀಯಾ? ನನಗೆ ಎದ್ದು ಹೋಗುವಷ್ಟು ತ್ರಾಣವಿರಲಿಲ್ಲ. ನಿನಗೆ ಎಚ್ಚರವಾಗಲೆಂದು ಕಾದಿದ್ದೆ."

ಕೂಡಲೇ ಉಗ್ರಾಣಕ್ಕೆ ಇಳಿದು ಹೋಗಿ ಬ್ರಾಂದಿ ಸೀಸೆಯನ್ನೂ ಬಿಸ್ಕತ್ತುಗಳನ್ನೂ ತಂದೆ. ಬಿಲ್ಲಿ ಎರಡು ಬಿಸ್ಕತ್ತು ತಿಂದು ನೀರಿನಲ್ಲಿ ಬ್ರಾಂದಿ ಬೆರಸಿಕೊಂಡು ಕುಡಿದ. ಬೇಗ ನಿದ್ದೆ ಬಂತು.

ಒಂದೆರಡು ಘಂಟೆ ಕಳೆದ ಮೇಲೆ ಅವನಿಗೆ ಎಚ್ಚರವಾಯಿತು.

"ಈಗ ಪರವಾಯಿಲ್ಲ. ನಿದ್ದೆ ಬಂದ ಮೇಲೆ ಸ್ವಲ್ಪ ವಾಸಿ.'' ಎಂದು ಏಳುವುದಕ್ಕೆ ಯತ್ನಿಸಿ ಮತ್ತೆ ನರಳುತ್ತಾ ಮಲಗಿದನು.

"ಬಿಲ್ಲಿ, ನೀನು ಆಯಾಸಮಾಡಿಕೊಳ್ಳದೆ ಸುಮ್ಮನೆ ಮಲಗು. ಏನಾದರೂ ಸ್ವಲ್ಪ ಆಹಾರ ತೆಗೆದುಕೊ. ನಿನ್ನ ಗಾಯ ಹೇಗಿದೆ

ನೋಡೋಣ. ನಿನ್ನೆಯ ಕಥೆಯನ್ನೆಲ್ಲಾ ಆಮೇಲೆ ಹೇಳುವೆಯಂತೆ."

ಕೆಳಗಿಳಿದು ಹೋಗಿ ಬೆಂಕಿಹತ್ತಿಸಿ, ಕಾಫಿ ಮಾಡಿ, ಅವನಿಗೆ ಸ್ವಲ್ಪ ತಿಂಡಿಯನ್ನೂ ಕಾಫಿಯನ್ನೂ ಕೊಟ್ಟೆ. ಅವನು ಪ್ರೀತಿಯಿಂದ ಮೆಲು ನಗೆ ನಕ್ಕು ಅದನ್ನು ತೆಗೆದುಕೊಂಡು ಎದ್ದು ಕುಳಿತನು. ನಾನೂ ಅವನ ಜೊತೆಯಲ್ಲೇ ತಿಂಡಿಯನ್ನು ತೆಗೆದುಕೊಂಡೆ.

" ಬಿಲ್ಲಿ, ಮತ್ತೆ ಮಲಗಿಕೊ ನಿನ್ನ ಗಾಯ ಹೇಗಿದೆ ನೋಡ ಬೇಕು."

ಅವನಿಗೆ ಗುಂಡು ಬಿದ್ದಿತ್ತು. ಪೆಟ್ಟು ಬಲಗಡೆ ಇದ್ದುದರಿಂದ ಹೃದ ಯಕ್ಕೆ ಅಪಾಯವಿರಲಿಲ್ಲ. ರಕ್ತವೂ ಹೆಚ್ಚಾಗಿ ಹರಿದಂತೆ ಕಾಣಲಿಲ್ಲ.

" ಏನೂ ಅಪಾಯವಿಲ್ಲ, ಬಿಲ್ಲಿ, ಬೇಗ ವಾಸಿಯಾಗುತ್ತೆ."

ಬಿಲ್ಲಿ ತಲೆ ಅಲ್ಲಾಡಿಸಿದ. "ಇಲ್ಲ, ನಿನಗೆ ಅದರ ವಿಷಯ ಗೊತ್ತಿಲ್ಲ. ....ಅದು ಹೋಗಲಿ, ನಿನ್ನೆ ನಡೆದದ್ದನ್ನೆಲ್ಲಾ ಹೇಳುತ್ತೇನೆ, ಕೇಳು. ರಾತ್ರಿ ನಾವು ಹೊರಟ ಒಂದೆರಡು ನಿಮಿಷಗಳಲ್ಲೇ ಒಂದು ಗುಂಡಿನ ಸದ್ದು ಕೇಳಿತಲ್ಲವೆ? ಅದನ್ನು ಹೊಡೆದವನು ನಾನೇ. ನಿರಪರಾಧಿಗಳಾದ ಕಿರಾತರನ್ನು ಕ್ಯಾಪ್ಟನ್ ಮೋಸದಿಂದ ಕೊಲ್ಲುವನಲ್ಲ, ಎಂದು ನನ್ನ ಮನಸ್ಸು ಮರುಗಿತು. ಮುಂಚೆಯೇ ಗುಂಡು ಹಾರಿದ ಸದ್ದು ಕೇಳಿದರೆ ತನ್ನ ತಂತ್ರ ಕೆಟ್ಟುಹೋಯಿತೆಂದುಕೊಂಡು ಕ್ಯಾಪ್ಟನ್ ಹಿಂದಿರುಗಬಹು ದೆಂದು ಯೋಚಿಸಿ ಪಿಸ್ತೂಲನ್ನು ಹಾರಿಸಿದೆ. ಆದರೆ ಕ್ಯಾಪ್ಟನ್ ಅದನ್ನು ನೋಡಿ ಕೂಡಲೇ ನನ್ನನ್ನು ಪಿಸ್ತೂಲಿನಿಂದ ಹೊಡೆದ. ಸದ್ದು ಕೇಳಿ ಕಿರಾತರೆಲ್ಲರೂ ಸಿದ್ಧರಾಗುವರೆಂದು ತಿಳಿದಮೇಲೂ ಹಿಂದಿರುಗದೆ ಮುಂದೆ ನುಗ್ಗಿದ. ಅವನಿಗೆ ಒಂದು ತರಹ ಪಿಶಾಚಿ ಯಂಥ ಧೈರ್ಯವಿದೆ. ಗುಂಡಿನೇಟು ಬಿದ್ದ ಕೂಡಲೆ ನನಗೆ ಜ್ಞಾನ ತಪ್ಪಿತು. ಸ್ವಲ್ಪ ಹೊತ್ತಿನ ಮೇಲೆ ಹಳ್ಳಿಯ ಕಡೆಯಿಂದ ಭಯಂಕರವಾದ ಗರ್ಜನೆ ಕೇಳಿಬಂದು ನನಗೆ ಎಚ್ಚರವಾಯಿತು. ಎದ್ದು ಆ ಕಡೆ ನೋಡಿದೆ. ಸ್ವಲ್ಪ ದೂರದಲ್ಲಿ ದೊಡ್ಡದಾದ ಬೆಂಕಿ ಉರಿಯು ತ್ತಿತ್ತು. ಅದರ ಬೆಳಕಿನಲ್ಲಿ ನಮ್ಮವರನ್ನೆಲ್ಲಾ ಕಂಬಗಳಿಗೆ ಬಿಗಿದದ್ದು ಕಾಣಿಸಿತು. ಕಿರಾತರೆಲ್ಲಾ ದೆವ್ವಗಳಂತೆ ಅವರ ಸುತ್ತ ಅರಚಿಕೊಂಡು

ಕುಣಿದಾಡುತ್ತಿದ್ದರು. ನಾನು ನೋಡುತ್ತಿದ್ದ ಹಾಗೇ ಒಬ್ಬ ಕಿರಾತ ಕಠಾರಿಯನ್ನು ಹಿಡಿದು ಕ್ಯಾಪ್ಟನ್ನನ ಕಡೆ ನುಗ್ಗಿದ. ನಾನು ಕಣ್ಣು ಮುಚ್ಚಿಕೊಂಡು ಹಿಂದಿರುಗಿ ದೋಣಿಯ ಕಡೆಗೆ ಓಡಿಬಂದೆ. ಆದರೆ ಯಾರೋ ಕೆಲವರು ಕಿರಾತರು ನನ್ನನ್ನು ಕಂಡು ಅಟ್ಟಿಬಂದರು. ಆದರೂ ತಪ್ಪಿಸಿಕೊಂಡು ದೋಣಿಗೆ ಬಂದೆ. ಮುಂದೆ ನಡೆದದ್ದೆಲ್ಲಾ ನಿನಗೇ ಗೊತ್ತಿದೆ."

ಇಷ್ಟು ಮಾತಾಡಿದ್ದರಿಂದ ಬಿಲ್ಲಿಗೆ ಬಹಳ ಆಯಾಸವಾಯಿತು. ಹಿಂದಿನ ದಿನದ ಚರಿತ್ರೆ ಜ್ಞಾಪಕಕ್ಕೆ ಬಂದು ಅವನ ಮೈಯೆಲ್ಲಾ ನಡುಗುತ್ತಿತ್ತು. ಅದನ್ನು ಮರೆಸಬೇಕೆಂದು ನಾನು ಬೇರೆ ಮಾತೆತ್ತಿದೆ.

"ಬಿಲ್ಲಿ, ನಡೆದದ್ದು ನಡೆದು ಹೋಯಿತು. ಮುಂದೇನು ಮಾಡಬೇಕೋ ಯೋಚಿಸೋಣ. ಈಗ ಈ ಹಡಗು ನಮ್ಮ ವಶಕ್ಕೆ ಬಂದಿದೆ. ಫೆಸಿಫಿಕ್ ಸಾಗರದಲ್ಲಿ ನಾವು ಎಲ್ಲಿಬೇಕಾದರೂ ತಿರುಗಬಹುದು. ಏನು ಮಾಡೋಣ ಹೇಳು.''

"ಎಲ್ಲಿಗೆ ಹೋದರೆ ನನಗೇನು, ರೋವರ್? ನಾನಂತೂ ಹೆಚ್ಚು ದಿನ ಬದುಕುವಹಾಗಿಲ್ಲ. ನೀನೇ ನಿಶ್ಚಯಿಸು. ನೀನು ಒಪ್ಪಿದ್ದಕ್ಕೆ ನಾನೂ ಒಪ್ಪುತ್ತೇನೆ.''

"ಹಾಗಾದರೆ ನಮ್ಮ ಹವಳದ ದ್ವೀಪಕ್ಕೆ ಹೋಗೋಣ. ಜಾಕಿಯುನ್ನೂ ಪೀಟರನ್ನೂ ಬಿಟ್ಟು ಬಹಳ ದಿನವಾಯಿತು. ಆ ದ್ವೀಪಕ್ಕೆ ಹೆಸರಿಲ್ಲ. ಆದರೆ ಕ್ಯಾಪ್ಟನ್ ಭೂಪಟದಲ್ಲಿ ಅದಿರುವ ಸ್ಥಳ ತೋರಿಸಿದ್ದ. ಆದ್ದರಿಂದ ಆ ಕಡೆಗೆ ಹಡಗನ್ನು ನಡೆಸಬಹುದು."

ಆ ದಿನ ಮಧ್ಯಾಹ್ನ ಗಾಳಿಯ ಹೊಡೆತ ಜೋರಾಯಿತು. ದೊಡ್ಡ ಅಲೆಗಳು ಎದ್ದವು. ಹಡಗಿನ ಏರಿಳಿತ ಹೆಚ್ಚಿದ್ದರಿಂದ ಅದರ ಮೇಲೆ ಓಡಾಡುವುದೇ ಕಷ್ಟವಾಯಿತು. ಬಿಲ್ಲಿ ಉರುಳಿ ಹೋಗದಂತೆ ಹತ್ತಿರವಿದ್ದ ಕಂಬವನ್ನು ಭದ್ರವಾಗಿ ಹಿಡಿದಿದ್ದನು. ಸಂಜೆಯಾದ ಹಾಗೆಲ್ಲಾ ದೊಡ್ಡ ಸುಂಟರಗಾಳಿಯೇ ಬೀಸಲಾರಂಭಿಸಿತು. ಒಂದು ದೊಡ್ಡ ಅಲೆಯ ಹೊಡೆತದಿಂದ ಹಡಗು ಅರ್ಧಮಟ್ಟಿಗೆ ಬಗ್ಗಿಹೋಯಿತು ಆ ಸಮಯದಲ್ಲಿ ಬಿಲ್ಲಿಯ ಕೈತಪ್ಪಿ ಅವನು ಬಲವಾಗಿ ಹಡಗಿನ ಪಕ್ಕಕ್ಕೆ

ಉರುಳಿದನು. ತಲೆ ಮರಕ್ಕೆ ಬಡಿದು ಅವನಿಗೆ ಜ್ಞಾನತಪ್ಪಿತು. ನಾನು ಹಡಗು ನಡೆಸುವ ಚಕ್ರವನ್ನು ಹಿಡಿದಿದ್ದೆ. ಕೂಡಲೆ ಚಕ್ರವನ್ನು ಬಿಟ್ಟು ಬಿಲ್ಲಿಯ ಬಳಿಗೆ ಹೋಗಿ ಅವನನ್ನು ಹಾಸಿಗೆಯಮೇಲೆ ಮಲಗಿಸೋಣವೆಂದು ಎತ್ತಿದೆ. ಆದರೆ ಅವನ ಪ್ರಾಣಹಾರಿಹೋಗಿತ್ತು. ಮೊದಲೇ ಗಾಯಗೊಂಡಿದ್ದ ಶರೀರ ಈ ಹೊಸ ಪೆಟ್ಟನ್ನು ಹೇಗೆ ತಾನೆ ತಡೆದೀತು!

ನನಗೆ ಇದ್ದ ಒಬ್ಬ ಸ್ನೇಹಿತನೂ ಕಣ್ಮರೆಯಾದ. ಆ ಮಹಾ ಸಾಗರದ ಮೇಲೆ ಒಂಟಿಯಾದ ಹಡಗಿನಲ್ಲಿ ನಾನೂ ಒಂಟಿ! ಬಿಲ್ಲಿ ಸತ್ತದ್ದಕ್ಕಾಗಿ ವ್ಯಸನವೊಂದು ಕಡೆ; ನನ್ನ ಗತಿಯೇನಾಗುವುದೋ ಎಂಬ ಚಿಂತೆ ಮತ್ತೊಂದು ಕಡೆ. ನನ್ನ ಪ್ರಿಯ ಸ್ನೇಹಿತನ ಶವದ ಬಳಿ ಕುಳಿತು ಅವನ ಆತ್ಮಕ್ಕೆ ಶಾಂತಿಯಾಗಲೆಂದು ಪ್ರಾರ್ಥನೆ ಮಾಡಿ, ಅವನ ಕಾಲಿಗೆ ಫಿರಂಗಿ ಗುಂಡನ್ನು ಕಟ್ಟಿ ಅತಿ ದುಃಖದಿಂದ ಶವವನ್ನು ಸಮುದ್ರಕ್ಕೆ ಇಳಿಸಿದೆ.

ಮುಂದಿನ ಕೆಲವು ದಿನಗಳನ್ನು ಹೇಗೆ ಕಳೆದೆನೋ ತಿಳಿಯದು. ಸುಂಟರಗಾಳಿಯೇನೋ ಬೇಗ ಇಳಿದು ಹೋಗಿ ಹಡಗು ವೇಗವಾಗಿ ಹವಳದ ದ್ವೀಪದ ಕಡೆಗೆ ಸಾಗಿತು. ಸಹಾಯಕ್ಕೆ ಯಾರೂ ಇಲ್ಲದ್ದರಿಂದ ಹಡಗಿನ ಪಟಗಳನ್ನು ಏರಿಸುವುದೂ ಸುತ್ತುವುದೂ ಬಹಳ ಕಷ್ಟವಾಯಿತು. ಇದರ ಮೇಲೆ ಹಡಗು ನಡೆಸುವವನೂ ನಾನೇ, ಉಳಿದ ಕೆಲಸ ಮಾಡುವವನೂ ನಾನೇ. ಆದರೆ ಎರಡು ದಿನ ಕಳೆದ ಮೇಲೆ ಹವ ಬಹಳ ಚೆನ್ನಾಯಿತಲ್ಲದೆ ಹವಳದ ದ್ವೀಪದ ಕಡೆಗೇ ಗಾಳಿ ಬೀಸತೊಡಗಿತು. ನನ್ನ ಕೆಲಸ ಹಗುರವಾಯಿತು. ಬಿಲ್ಲಿ ಸತ್ತು ಹೋದದ್ದರಿಂದ ಉಂಟಾದ ದುಃಖವೂ ಸ್ವಲ್ಪ ಶಮನವಾಯಿತು. ದೇವರು ಕೊಟ್ಟ ಸಂಕಟವನ್ನು ತಲೆಬಾಗಿ ಸಹಿಸಬೇಕೇ ಹೊರತು ಅದಕ್ಕಾಗಿ ಮರುಗಿ ಧೈರ್ಯಗೆಡಬಾರದು ಎಂದು ಮನಸ್ಸಿಗೆ ಶಾಂತಿ ತಂದುಕೊಂಡೆ.

ಹೀಗೆ ಎರಡು ವಾರ ಪ್ರಯಾಣ ಮಾಡಿದ್ದಾಯಿತು. ಹದಿನೈದನೆಯ ರಾತ್ರಿ ನನಗೆ ಚೆನ್ನಾಗಿ ನಿದ್ದೆ ಬರಲಿಲ್ಲ. ಬೆಳಗಿನ ಜಾವ ಸೂರ್ಯೋದಯಕ್ಕಿಂತ ಮುಂಚೆಯೇ ಎದ್ದು ಅಟ್ಟದ ಮೇಲೆ ನಿಂತು ನೋಡುತ್ತಿದ್ದೆ. ಸ್ವಲ್ಪ ದೂರದಲ್ಲಿ ಏನೋ ಕರಿಯ ವಸ್ತು ಹಬ್ಬಿದಂತೆ

ಕಂಡಿತು. ಅದು ಮೋಡವಿರಬಹುದು ; ಮತ್ತೆ ಬಿರುಗಾಳಿ ಏಳುವುದೋ ಏನೋ ಎಂದು ಶಂಕೆಯುಂಟಾಯಿತು. ಬಿರುಗಾಳಿ ಬೀಸಿದಂತೆ ಸದ್ದೂ ಕೇಳಿಸಲಾರಂಭಿಸಿತು. ನಾನು ಕೂಡಲೇ ಹಡಗಿನ ಪಟವನ್ನು ಸುತ್ತುವ ಕೆಲಸಕ್ಕೆ ಹೊರಟೆ. ಅದನ್ನು ಮಾಡಿ ಮುಗಿಸುವ ವೇಳೆಗೆ ಬೆಳಕು ಹರಿಯುವ ಸಮಯವಾಯಿತು. ಆಗ ತಾನೆ ಪೂರ್ವದಿಂದ ಹೊರಟ ಬೆಳಕಿನಲ್ಲಿ—ಅದೇನು ಕನಸೋ ನಿಜವೋ! ಆ ಬಂಡೆಯ ಸಾಲು, ಅಲೆಗಳ ಸಂತತವಾದ ಗರ್ಜನೆ-ನಾನು ಕಂಡದ್ದು ಮೋಡವಲ್ಲ, ನಮ್ಮ ಹವಳದ ದ್ವೀಪ! ಬಿರುಗಾಳಿಯಂತೆ ಕೇಳಿದ್ದು ಅಲೆಗಳ ಹೊಡೆತ. ನನ್ನ ಮನಸ್ಸಿನಲ್ಲಿ ಕೋಲಾಹಲ. ಸ್ನೇಹಿತರನ್ನು ನೋಡುವ ಆತುರದಲ್ಲಿ ಹಡಗಿನ ಯಾವ ಕಡೆಯಲ್ಲೂ ನಿಲ್ಲಲಾರೆ, ಯಾವ ಕೆಲಸವನ್ನೂ ಮಾಡ ಲಾರೆ. ಸುಮಾರು ಐದುವರೆ ಘಂಟೆ; ನನ್ನ ಸ್ನೇಹಿತರು ಇನ್ನೂ ಎದ್ದಿರುವುದಿಲ್ಲ. ಇನ್ನು ಅರ್ಧಘಂಟೆಯೊಳಗೇ ನಾನು ದ್ವೀಪವನ್ನು ಸೇರಬಹುದು.

ಹೀಗೆ ಯೋಚಿಸುತ್ತಾ ಹುಚ್ಚನಂತೆ ಹಡಗಿನ ಮೇಲೆ ತಿರುಗುತ್ತಿ ದ್ದಾಗ ಕಡಲುಗಳ್ಳರ ಗುರುತಾದ ಕರಿಯ ಬಾವುಟ ಕಣ್ಣಿಗೆ ಬಿತ್ತು. ನಾನು ದ್ವೀಪವನ್ನು ಹೇಗೆ ಬಿಟ್ಟೆನೋ ಹಾಗೇ ಹಿಂದಿರುಗಬೇಕೆಂದು ಆ ಬಾವುಟವನ್ನು ತೆಗೆದು ಹಡಗಿನ ತುದಿಯಿಂದ ಹಾರಿಸಿದೆ. ಹಾಗೇ ಮತ್ತೊಂದು ಯೋಚನೆ ಬಂತು. ಹುಸಿಮದ್ದನ್ನು ತೆಗೆದು ಫಿರಂಗಿಗೆ ತುಂಬಿ ಸಮಯ ಕಾಯುತ್ತಾ ನಿಂತೆ.

ಬಂಡೆಯ ಸಾಲು ಇನ್ನೇನು ಕಾಲುಮೈಲಿ ಉಳಿಯಿತು.....ಅದರ ದ್ವಾರವೂ ಬಂತು. ನಾನು ಪ್ರೀತಿಯಿಂದ ಬಂಡೆಗಳ ಕಡೆ ನೋಡು ತ್ತಿದ್ದ ಹಾಗೇ ಹಡಗು ಹಂಸ ತೇಲುವಂತೆ ಸುಖವಾಗಿ ತೇಲಿಕೊಂಡು ಒಳಗಡಲಿಗೆ ಬಂತು. ನಮ್ಮ ಗುಡಿಸಲಿನ ಎದುರಿಗೆ ಸರಿಯಾಗಿ ಹಡ ಗನ್ನು ನಿಲ್ಲಿಸಿ ಲಂಗರುಹಾಕಿ, ಫಿರಂಗಿಗೆ ಬೆಂಕಿತೋರಿಸಿದೆ. ನಿದ್ರಿಸುವಂ ತಿದ್ದ ಬೆಟ್ಟಗಳೆಲ್ಲಾ ಫಿರಂಗಿಯ ಗರ್ಜನೆಗೆ ಮರುದನಿ ಕೊಟ್ಟು ನಡುಗಿ ಹೋದವು. ಮರುಕ್ಷಣವೇ ಅರ್ಧ ಬಟ್ಟೆ ಹಾಕಿಕೊಂಡು ಪೀಟರ್ ಹೊರಕ್ಕೆ ಓಡಿ ಬಂದು ಹಡಗನ್ನು ನೋಡಿ ಗಟ್ಟಿಯಾಗಿ ಕೂಗಿಕೊಂಡು

ಕಾಡುಬೆಕ್ಕಿನಂತೆ ನೆಗೆದು ಹಾರಿಹೋದ. ಅವನ ಹಿಂದೆಯೇ ಜಾಕಿ ಬಂದು ತಾನೂ ಓಡಿ ಹೋಗುವದರಲ್ಲಿದ್ದ. ಅಷ್ಟರಲ್ಲೇ ನಾನು ಹುಚ್ಚು ಸಂತೋಷದಿಂದ ಕಿರಿಚಿದೆ.

"ಹೋ ಜಾಕಿ! ಪೀಟರ್! ನಾನು ಕಣೋ, ನಾನು! ರೋವರ್!''

ನನ್ನ ಕೂಗನ್ನು ಕೇಳಿ ಅವರು ತಿರುಗಿ ನೋಡಿ, ನಾನು ಮತ್ತೊಂದು ಸಾರಿ ಕೂಗಿದಾಗ ನನ್ನ ದನಿಯನ್ನು ಗುರುತಿಸಿ ಆಕ್ಷಣವೇ ಜಿಂಕೆಗಳ ಹಾಗೆ ನೀರಿನ ಕಡೆ ಓಡಿ ಬಂದರು. ನನಗೆ ಹಡಗಿನ ಮೇಲೆ ಇರುವುದು ಸಾಧ್ಯವಾಗಲಿಲ್ಲ. ಜಾಕಿ ನೀರಿಗೆ ಧುಮುಕಿದ ಕ್ಷಣವೇ ನಾನು ಹಡಗಿನಿಂದ ಹಾರಿದೆ. ಇಬ್ಬರೂ ನಡುನೀರಿನಲ್ಲಿ ಸಂಧಿಸಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ತಳಕ್ಕೆ ಮುಳುಗಿಹೋಗಿ ನೀರಿನಲ್ಲೇ ಮಾತಾಡುವ ಪ್ರಯತ್ನಮಾಡಿ ಇಬ್ಬರೂ ನೀರು ಕುಡಿದು, ಕೆಮ್ಮುತ್ತಾ ಮೇಲಕ್ಕೆ ಬಂದೆವು. ಪೀಟರ್ ಅಲ್ಲಿಯೇ ಈಜಾಡುತ್ತಾ ಒಂದು ನಿಮಿಷ ಅತ್ತು ಮತ್ತೊಂದು ನಿಮಿಷ ನಕ್ಕು ಕೇಕೆಹಾಕುತ್ತಿದ್ದ.

ಮತ್ತೆ ನೆಲಕ್ಕೆ ಬಂದಮೇಲಂತೂ ನಮ್ಮ ಆನಂದವನ್ನು ಬಣ್ಣಿಸುವುದಕ್ಕೆ ಹತ್ತು ನಾಲಗೆ ಸಾಲದು. ಒಬ್ಬರನ್ನೊಬ್ಬರು ನಾಪರಸಾರಿ ಅಪ್ಪಿಕೊಂಡೆವು. ಒಬ್ಬರ ಮಾತು ಇನ್ನೊಬ್ಬರಿಗೆ ಅರ್ಥವಾಗದಂತೆ ಎಲ್ಲರೂ ಒಟ್ಟಿಗೆ ಮಾತಾಡಿದೆವು. ಮಧ್ಯೆ ಮಧ್ಯೆ ಹುಚ್ಚು ಹುಚ್ಚಾಗಿ ಕೂಗಾಟ. ಕುಣಿದು ಕುಪ್ಪಳಿಸಿ ಕೈಕಾಲು ಸೋತುಹೋಗುವವರೆಗೂ ತೀರದಲ್ಲಿ ಓಡಾಡಿದೆವು.

ಆ ದಿನವೆಲ್ಲಾ ಪೀಟರಿಗೆ ವಿರಾಮವೇ ಇಲ್ಲ. ಬಾಳೇ ಹಣ್ಣು, ಬ್ರೆಡ್ ಹಣ್ಣು, ಪ್ಲಮ್, ಗೆಣಸು, ಟಾರೋ. ತೆಂಗಿನಕಾಯಿ ಮುಂತಾದ್ದನ್ನು ತಂದು ತಂದು ನನ್ನ ಮುಂದಿಡುವನು. ನಾನು ಎಷ್ಟು ತಿಂದರೂ ಅವನಿಗೆ ತೃಪ್ತಿಯಿಲ್ಲ. ಬೇಡ ಬೇಡವೆಂದರೂ ಬಾಯಿಗೆ ಹಿಡಿಯುವನು. ನಾನು ತಿನ್ನುತ್ತಿದ್ದಾಗಲೇ ದ್ವೀಪವನ್ನು ಬಿಟ್ಟು ಹೋದ ಮೇಲೆ ನಡೆದ ಕಥೆಯೆಲ್ಲವನ್ನೂ ಹೇಳಿದೆ. ಒಂದು ಸಾರಿ ಹೇಳಿ ಮುಗಿಸಿದ ಮೇಲೆ ಮತ್ತೊಂದು ಸಾರಿ ಹೇಳಿಸಿದರು. ಅನಂತರ ಕೆಲವು ಭಾಗಗಳನ್ನು ಮೂರನೆಯ ಸಲ ಹೇಳಬೇಕಾಯಿತು. ಆವತಿಯ

ವಿಷಯ ಕೇಳಿ ಅವರಿಬ್ಬರಿಗೂ ಬಹಳ ವ್ಯಸನವಾಯಿತು.

"ಅವಳನ್ನು ಕೊಂದು ಹಾಕುತ್ತಾನಂತೋ ಆ ಟರಾರ! ಜಾಕಿ, ನೀನು ಅವನನ್ನು ಉಳಿಸಿದ್ದೇ ತಪ್ಪಾಯಿತು. ಇಲ್ಲಿಯೇ ಅವನನ್ನು ಹೂತುಬಿಡಬೇಕಾಗಿತ್ತು." ಎಂದು ಪೀಟರ್ ರೇಗಿದ.

ಜಾಕಿ ಸ್ವಲ್ಪ ಯೋಚನೆ ಮಾಡಿ ಹೇಳಿದ. "ಈಗ ನಮಗೆ ಅಚ್ಚುಕಟ್ಟಾದ ಹಡಗು ಸಿಕ್ಕಿದೆ. ನಮ್ಮನ್ನು ಹೇಳುವವರು ಕೇಳುವವರು ಯಾರೂ ಇಲ್ಲ. ನನಗೆ ಇನ್ನೂ ಕೆಲವು ದ್ವೀಪಗಳನ್ನು ನೋಡಬೇಕೆಂಬ ಆಸೆಯಿದೆ. ಏನು ಹೇಳುತ್ತೀರಿ?"

"ನಾನು ಕೊಡಬೇಕೆಂದಿದ್ದ ಸಲಹೆಯನ್ನೇ ನೀನು ಕೊಟ್ಟುಬಿಟ್ಟರೆ ನಾನೇನು ಹೇಳಲಿ! ಈಗಲೇ ಹೊರಟುಬಿಡೋಣ." ಎಂದ, ಪೀಟರ್.

"ಸರಿ ಹಾಗಾದರೆ, ಮೊದಲು ಆವತಿ ವಾಸವಾಗಿರುವ ದ್ವೀಪಕ್ಕೆ ಹೋಗಿ ಸಾಧ್ಯವಾದರೆ ಅವಳನ್ನು ಉಳಿಸುವ ಪ್ರಯತ್ನ ಮಾಡೋಣ. ಅವಳನ್ನು ಸ್ಮಶಾನಕ್ಕೆ ಕಳಿಸುವ ಬದಲು ಅವಳಿಗೆ ಬೇಕಾದ ಗಂಡನ ಮನೆಗೇ ಕಳಿಸು ಎಂದು ಟರಾರನಿಗೆ ಹೇಳಬೇಕು. ಅವನಿಗೇನಾದರೂ ಕೃತಜ್ಞತೆಯಿದ್ದರೆ ನಮ್ಮ ಮಾತು ಕೇಳುತ್ತಾನೆ"

೧೫

## ಆವತಿಯನ್ನು ರಕ್ಷಿಸುವ ಪ್ರಯತ್ನ

ಆ ದಿನವೇ ಹೊರಡುವ ಏರ್ಪಾಡು ನಡೆಯಿತು. ನಮಗೇನೂ ಸಾಮಾನು ಸರಂಜಾಮು ಕಟ್ಟುವ ತೊಂದರೆಯಿರಲಿಲ್ಲವಷ್ಟೆ. ಕೊಡಲಿ, ಟೆಲಿಸ್ಕೋಪು ಮುಂತಾದ್ದನ್ನೆಲ್ಲ ದೋಣಿಗೆ ಹಾಕಿದೆವು. ಅನಂತರ ಒಂದು ಮರದ ಚೂರಿನಮೇಲೆ ನಮ್ಮೆಲ್ಲರ ಹೆಸರನ್ನೂ ಒಂದರ ಕೆಳಗೆ ಒಂದರಂತೆ ಕೆತ್ತಿ ಅದನ್ನು ಗುಡಿಸಲಿನಲ್ಲಿ ಒಂದು ಕಂಬಕ್ಕೆ ಸಿಕ್ಕಿಸಿದೆವು. ಅದಾದ ಮೇಲೆ ಸ್ವಲ್ಪ ಹಣ್ಣುಹಂಪಲು, ತೆಂಗಿನಕಾಯಿಗಳನ್ನು ತುಂಬಿಕೊಂಡು ಹಡಗನ್ನು ಹತ್ತಿದೆವು. ಗಾಳಿ ಚೆನ್ನಾಗಿ ಬೀಸುತ್ತಿದ್ದುದರಿಂದ ಬೇಗ ಒಳಗಡಲನ್ನು ದಾಟಿ ಸಮುದ್ರಕ್ಕೆ ಬಂದು ಕೊನೆಯ ಸಾರಿ ಬಂಡೆಯ

ಮೇಲೆ ಅಲೆ ಉರುಳುವುದನ್ನು ನೋಡಿ, ಮುಂದಕ್ಕೆ ಪ್ರಯಾಣಮಾಡಿ ದೆವು. ಕತ್ತಲೆಯಾಗುವ ಹೊತ್ತಿಗೆ ಹವಳದ ದ್ವೀಪದ ಋಣ ತೀರಿ ಅದು ಕಣ್ಮರೆಯಾಯಿತು.

ನಮ್ಮ ಪ್ರಯಾಣದ ವಿಷಯ ಹೆಚ್ಚೇನೂ ಬರೆಯಬೇಕಾದ್ದಿಲ್ಲ. ಯಾವ ತೊಂದರೆಯೂ ಇಲ್ಲದೆ ಮೂರುವಾರ ಕಳೆದಮೇಲೆ ಮಂಗೋ ದ್ವೀಪಕ್ಕೆ ಬಂದೆವು. ಬಿಲ್ಲಿ ಅದರ ಸ್ವರೂಪವನ್ನು ವರ್ಣಿಸಿದ್ದರಿಂದ ಅದನ್ನು ನಾನು ಸುಲಭವಾಗಿ ಗುರುತುಹಿಡಿದೆ.

ಆ ದ್ವೀಪದ ದಕ್ಷಿಣಭಾಗದಲ್ಲಿ ಒಬ್ಬ ಉಪಾಧ್ಯಾಯ ನೆಲಸಿ ಕಿರಾತರಿಗೆ ಓದುಬರಹ ಹೇಳಿಕೊಡುತ್ತಿದ್ದನಂತೆ. ಬಿಲ್ಲಿ ಇದನ್ನು ನನಗೆ ಹೇಳಿದ್ದುದು ನೆನಪಿಗೆ ಬಂತು. ಆ ಉಪಾಧ್ಯಾಯನನ್ನು ಕಂಡು ಮಾತಾಡೋಣವೆಂದು ಹಳ್ಳಿಯ ಕಡೆಗೇ ತಿರುಗಿದೆವು. ಸಂಜೆಯ ಹೊತ್ತಿಗೆ ಅಲ್ಲಿಯ ಬಂಡೆ ಸಾಲಿನ ಬಳಿಗೆ ಬಂದು ಲಂಗರುಹಾಕಿದ್ದಾ ಯಿತು. ನಾವಾಗಿಯೇ ಹಳ್ಳಿಗೆ ಹೋಗೋಣವೆ ಎಂದು ಚರ್ಚೆ ಮಾಡುತ್ತಾ ಇರುವಾಗ ತೀರದಿಂದ ದೋಣಿಯೊಂದು ಹಡಗಿನ ಕಡೆಗೆ ಬಂತು. ಅದರಲ್ಲಿ ಬಹಳ ಸಭ್ಯನಾಗಿ ಕಾಣುತ್ತಿದ್ದವನೊಬ್ಬ ಕುಳಿತಿದ್ದ. ಅವನು ಕಿರಾತನಾದರೂ ನಮ್ಮಂತೆಯೇ ಉಡುಪುಹಾಕಿದ್ದನು. ಹಡಗಿಗೆ ಹತ್ತಿಬಂದು ನಮಗೆ ನಮಸ್ಕಾರಮಾಡಿ "ನೀವು ಬಂದದ್ದರಿಂದ ಬಹಳ ಸಂತೋಷವಾಯಿತು. ಚೆನ್ನಾಗಿದ್ದೀರ? ಊರಿಗೆ ಬರಬಹುದಲ್ಲ?" ಎಂದನು. ನಾವೂ ಅವನಿಗೆ ನಮಸ್ಕಾರಮಾಡಿ ಕುಶಲಪ್ರಶ್ನೆ ಕೇಳಿದೆವು.

"ಇಲ್ಲಿ ಉಪಾಧ್ಯಾಯರೊಬ್ಬರು ಇದ್ದಾರೆಂದು ಕೇಳಿದ್ದೆ. ನೀವೇ ಇರಬೇಕಲ್ಲವೆ?" ಎಂದು ಜಾಕ್ ಪ್ರಶ್ನೆ ಮಾಡಿದನು.

"ಹೌದು, ನಾನೇ."

"ಅನುಕೂಲವಾಯಿತು. ನಿಮ್ಮನ್ನು ನೋಡಬೇಕೆಂದೇ ನಾವು ಇಲ್ಲಿಗೆ ಬಂದದ್ದು. ಕೊಠಡಿಯೊಳಕ್ಕೆ ಬನ್ನಿ. ನಿಮ್ಮೊಡನೆ ಸ್ವಲ್ಪ ಮಾತಾಡಬೇಕಾಗಿದೆ."

ಅರ್ಧ ಘಂಟೆ ಸಂಭಾಷಣೆಯಾದಮೇಲೆ ಇಬ್ಬರೂ ಹೊರಗೆ ಬಂದರು. ಉಪಾಧ್ಯಾಯ ಮತ್ತೆ ನಮಗೆಲ್ಲಾ ನಮಸ್ಕಾರ ಹೇಳಿ

ದೋಣಿಯಲ್ಲಿ ಕುಳಿತು ದಡಕ್ಕೆ ಹೊರಟುಹೋದ. ಅವನನ್ನು ಕಳಿಸಿ ಕೊಟ್ಟಮೇಲೆ ಜಾಕಿ ತಾನು ಕೇಳಿದ್ದ ವಿಷಯವನ್ನೆಲ್ಲಾ ನಮಗೂ ತಿಳಿಸಿದನು. ಆವತಿ ಟರಾರನ ಹಳ್ಳಿಯಲ್ಲೇ ಇದ್ದಳಂತೆ. ಅವನ ಸ್ನೇಹಿತನನ್ನು ಮದುವೆಯಾಗುವುದಿಲ್ಲವೆಂದು ಅವಳು ಇನ್ನೂ ಹಟಮಾಡುತ್ತಲೇ ಇದ್ದುದರಿಂದ ಟರಾರ ಅವಳನ್ನು ಸೆರೆಯಲ್ಲಿಟ್ಟಿದ್ದನಂತೆ. " ಈ ಮಂಗೋ ದ್ವೀಪದ ದಕ್ಷಿಣಕ್ಕೆ ಐವತ್ತು ಮೈಲಿ ದೂರದಲ್ಲಿ ಇನ್ನೊಂದು ದ್ವೀಪವಿದೆ. ಅದರ ನಾಯಕನಲ್ಲೇ ಆವತಿ ಮೋಹಗೊಂಡಿರುವುದು. ಹೇಗಾದರೂ ಮಾಡಿ ಸೆರೆಯಿಂದ ತಪ್ಪಿಸಿಕೊಂಡು ಅಲ್ಲಿಗೆ ಓಡಿಹೋಗಬೇಕೆಂದು ಯೋಚಿಸುತ್ತಿದ್ದಾಳೆ. ನಾವು ಒಳ್ಳೆಯ ಸಮಯದಲ್ಲೇ ಬಂದಹಾಗಾಯಿತು." ಎಂದು ಜಾಕಿ ಕಥೆಯನ್ನು ಮುಗಿಸಿದನು.

ಉಪಾಧ್ಯಾಯ ವಾಸಿಸುತ್ತಿದ್ದ ಹಳ್ಳಿ ಒಂದು ಕೊಲ್ಲಿಯ ದಡದಲ್ಲಿ ಬಹಳ ರಮ್ಯವಾದ ಸ್ಥಳದಲ್ಲಿತ್ತು. ದಡದಿಂದ ಹಳ್ಳಿಯವರೆಗೂ ಬಗೆ ಬಗೆಯ ಮರಗಳು ಬೆಳೆದು ಸೊಂಪಾಗಿ ಕಾಣುತ್ತಿದ್ದವು. ಅದರ ಉತ್ತರ ದಿಕ್ಕಿನಲ್ಲಿದ್ದ ಸಣ್ಣ ಬೆಟ್ಟದ ಸಾಲೇ ಆ ಹಳ್ಳಿಗೂ ಟರಾರನ ಹಳ್ಳಿಗೂ ನಡುವೆ ಇದ್ದ ಗಡಿ. ನಾವು ದೋಣಿಯಿಂದ ಇಳಿಯುವ ಹೊತ್ತಿಗೆ ಉಪಾಧ್ಯಾಯನೂ ಅವನ ಹೆಂಡತಿಯೂ ದಡದ ಹತ್ತಿರ ಬಂದು ಕೈ ಕುಲುಕಿ ನಮಗೆ ಸುಸ್ವಾಗತವನ್ನು ಬಯಸಿದರು. ದಡದ ಮೇಲೆ ನಮ್ಮನ್ನು ನೋಡಲು ನೂರಾರು ಜನ ಕಿರಾತರ ಗುಂಪು ನೆರೆದಿತ್ತು. ನಾವು ಬಂದದ್ದರಿಂದ ಅವರೆಲ್ಲರಿಗೂ ಬಹಳ ಸಂತೋಷ. ಉಪಾಧ್ಯಾಯನು ನಮ್ಮನ್ನು ಮನೆಗೆ ಕರೆದುಕೊಂಡು ಹೋಗಿ ಬಹಳ ಆದರದಿಂದ ರುಚಿಯಾದ ತಿಂಡಿ ತೀರ್ಥಗಳನ್ನು ಕೊಟ್ಟು ಉಪಚರಿಸಿದನು. ಸ್ವಲ್ಪ ಹೊತ್ತು ಆ ಮಾತು ಈ ಮಾತು ನಡೆದ ಮೇಲೆ ಆವತಿಯ ವಿಷಯ ಚರ್ಚೆಗೆ ಬಂತು.

" ನೀವು ಆಕೆಯ ವಿಷಯದಲ್ಲಿ ಕೈಹಾಕುವುದು ಒಳ್ಳೆಯದಲ್ಲ. ಆ ಹಳ್ಳಿಯ ಕಾಡು ಜನರೆಲ್ಲ ಬಹಳ ಕ್ರೂರಿಗಳು. ಆವತಿಯ ಕಥೆ ಕೇಳಿದರೆ ನನಗೂ ವ್ಯಸನವಾಗುತ್ತದೆ. ಆದರೆ ನಾವು ಏನೂ ಸಹಾಯ ಮಾಡುವುದಕ್ಕಾಗುವುದಿಲ್ಲ. ನೀವು ಅವಳ ಕಡೆಗೆ ವಹಿಸಿಕೊಂಡು

ಬಂದರೆ ನಿಮ್ಮ ಮಾತೂ ನಡೆಯುವುದಿಲ್ಲ ; ನಿಮ್ಮ ಪ್ರಾಣಕ್ಕೇ ಅಪಾಯ ಬಂದರೂ ಬರಬಹುದು." ಎಂದು ಉಪಾಧ್ಯಾಯ ಎಚ್ಚರಿಕೆ ಕೊಟ್ಟನು.

ಜಾಕಿ ಒಂದೇ ಮಾತಿನಲ್ಲಿ ಉತ್ತರಕೊಟ್ಟ.

"ಉಪಾಧ್ಯಾಯರೆ, ಒಳ್ಳೆಯ ಕೆಲಸ ಸಾಧಿಸುವ ಸಂದರ್ಭದಲ್ಲಿ ಸಾಯಬೇಕಾದರೂ ನಾವು ಹೆದುರುವವರಲ್ಲ."

ಉಪಾಧ್ಯಾಯನಿಗೆ ಆ ಮಾತನ್ನು ಕೇಳಿ ಮೆಚ್ಚಿಕೆಯಾಯಿತು.

"ಹಾಗಾದರೆ ಆ ಹಳ್ಳಿಗೆ ಹೊರಡಬಹುದು. ನಾನು ನಿಮ್ಮ ಜೊತೆಯಲ್ಲಿ ಬಂದು ದುಬಾಸಿಯ ಕೆಲಸ ಮಾಡಿ ಒಬ್ಬರ ಮಾತನ್ನು ಇನ್ನೊಬ್ಬರಿಗೆ ಅರ್ಥ ಹೇಳುತ್ತೇನೆ. ಟರಾರನಿಗೆ ನನ್ನನ್ನು ಕಂಡರೆ ಆಗದು. ಆದರೂ ಇದುವರೆಗೆ ನನ್ನಲ್ಲಿ ಮಾರ್ಯಾದೆಯಿಂದಲೇ ನಡೆದುಕೊಂಡಿದ್ದಾನೆ" ಎಂದನು.

ಮಾರನೆಯ ದಿನ ನಾವು ದ್ವೀಪವನ್ನು ಸುತ್ತಿಕೊಂಡು ಟರಾರನ ಹಳ್ಳಿಯ ಕಡೆಗೆ ಹೋದೆವು. ಹಡಗಿನಲ್ಲಿ ಉಪಾಧ್ಯಾಯನ ಜೊತೆಗೆ ಅನೇಕ ಕಿರಾತರನ್ನು ಕರೆದುಕೊಂಡದ್ದಲ್ಲದೆ ನಮ್ಮ ಫಿರಂಗಿಯನ್ನು ಚೆನ್ನಾಗಿ ಬೆಳಗಿ ಪ್ರಕಾಶವಾಗಿ ಮಾಡಿದ್ದೆವು. ಇದೆಲ್ಲಾ ಟರಾರನಿಗೆ ನಮ್ಮಲ್ಲಿ ಭಯವೂ ಮರ್ಯಾದೆಯೂ ಹುಟ್ಟಲೆಂದು ಮಾಡಿದ ಯತ್ನ. ಎರಡು ಘಂಟೆ ಕಳೆಯುವುದರಲ್ಲಿ ನಾವು ಆ ಹಳ್ಳಿಯ ಸಮೀಪಕ್ಕೆ ಬಂದು ಗುಂಡು ಹಾರಿಸಿ ನಮ್ಮ ದೇಶದ ಬಾವುಟವನ್ನು ಹಡಗಿನ ಮೇಲೆ ಏರಿಸಿದೆವು.

ಗುಂಡಿನ ಸದ್ದು ಕೇಳಿದೊಡನೆ ಊರಿನ ಜನರೆಲ್ಲ ಹೆದರಿ ಹೊರಕ್ಕೆ ಓಡಿ ಬಂದರು. ಆದರೆ ನಾವು ಯಾವ ತೊಂದರೆಯನ್ನೂ ಕೊಡದೆ ಶಾಂತಿಯಿಂದಿದ್ದುದನ್ನು ನೋಡಿ ಅವರಿಗೆ ಧೈರ್ಯ ಬಂದಿರಬೇಕು. ನಾಲ್ಕೈದು ಜನ ದೋಣಿಯಲ್ಲಿ ಕೂತು ಹಡಗಿನ ಹತ್ತಿರ ಬಂದರು. ಉಪಾಧ್ಯಾಯ ಹೊರಗೆ ಬಂದು ಅವರೊಡನೆ ಮಾತಾಡಿದನು.

"ನಾವು ನಿಮ್ಮಲ್ಲಿ ಯುದ್ಧಕ್ಕಾಗಿ ಬಂದಿಲ್ಲ. ಸ್ನೇಹಭಾವದಿಂದ ಬಂದಿದ್ದೇವೆ. ನಿಮ್ಮ ನಾಯಕನೊಡನೆ ಮಾತಾಡಬೇಕಾಗಿದೆ. ಆತ ನನ್ನು ಹಡಗಿಗೆ ಬರಹೇಳಿ."

ಅವರು ಹೋದಮೇಲೆ ನಾವು ಆತುರದಿಂದ ಉತ್ತರ ಬರುವುದನ್ನೇ ಕಾಯುತ್ತಿದ್ದೆವು. ಕೊನೆಗೆ ಒಂದು ದೋಣಿ ಹೊರಟುಬಂತು. ಅದರಲ್ಲಿದ್ದವರು ಹಡಗಿನ ಮೇಲಕ್ಕೆ ಬಂದು ಟರಾರನ ಉತ್ತರವನ್ನು ತಿಳಿಸಿದರು.

" ನಮ್ಮ ನಾಯಕನಿಗೆ ಈ ದಿನ ಮತಸಂಬಂಧವಾದ ಹಬ್ಬವಾದ್ದರಿಂದ ಅವರು ಹಡಗಿಗೆ ಬರುವುದಕ್ಕಾಗುವುದಿಲ್ಲ. ಅಷ್ಟೇ ಅಲ್ಲದೆ ಇನ್ನೊಂದು ದ್ವೀಪದ ನಾಯಕ ಅವರ ಅತಿಥಿಯಾಗಿ ಬಂದಿದ್ದಾನೆ. ನೀವೇ ಹಳ್ಳಿಗೆ ಬರುವುದಾದರೆ ಬಹಳ ಸಂತೋಷ ಎಂದು ಹೇಳಿ ಕಳುಹಿಸಿದ್ದಾರೆ."

ನಾವು ಕೂಡಲೆ ಬರುವುದಾಗಿ ಉತ್ತರ ಕಳಿಸಿದೆವು.

ದಡದಲ್ಲಿ ಅರೆಬೆತ್ತಲೆಯಾಗಿದ್ದ ಕಿರಾತರ ಗುಂಪು ನೆರೆದು ನಮ್ಮನ್ನು ಸಂತೋಷದಿಂದ ಬರಮಾಡಿಕೊಂಡಿತು. ಅವರ ಜೊತೆಯಲ್ಲಿ ಒಂದು ಮನೆಗೆ ಹೋಗಿ ಅಲ್ಲಿ ತಿಂಡಿ ತೀರ್ಥ ತೆಗೆದುಕೊಂಡದ್ದಾಯಿತು.

"ನಿಮ್ಮ ನಾಯಕರೆಲ್ಲಿ? ಅವರನ್ನು ನೋಡಲು ಹೋಗೋಣವೆ?" ಎಂದು ಉಪಾಧ್ಯಾಯ ಕೇಳಿದನು. ಕಿರಾತರು ತಮ್ಮೊಳಗೇ ಏನೇನೋ ಮಾತಾಡಿಕೊಂಡರು. ಆಮೇಲೆ ಒಬ್ಬ ಮುಂದೆ ಬಂದು ಉಪಾಧ್ಯಾಯನಿಗೆ ಏನೋ ಹೇಳಿದನು.

" ಏನಂತೆ ? " ಎಂದು ಜಾಕಿ ಕೇಳಿದ.

" ನಾಯಕ ಈಗ ದೇವರ ಗುಡಿಗೆ ಹೋಗಬೇಕಂತೆ. ಇನ್ನು ಸ್ವಲ್ಪ ಹೊತ್ತಾದಮೇಲೆ ಸಿಕ್ಕುತ್ತಾನಂತೆ. ಸ್ವಲ್ಪ ಹೊತ್ತು ಕಾದು ನೋಡೋಣ."

ಸುಮಾರು ಅರ್ಧ ಘಂಟೆಯಾದ ಮೇಲೆ ಟರಾರನೇ ನಾವಿದ್ದ ಸ್ಥಳಕ್ಕೆ ಬಂದ. ಅವನ ಹಿಂದೆ ಎಂಟುಹತ್ತು ಜನ ಹಣ್ಣು ಹಂಪಲು ತುಂಬಿದ ಕುಕ್ಕೆಗಳನ್ನು ಹೊತ್ತು ತಂದರು.

ನಾವೂ ಎದ್ದು ಎರಡು ಹೆಜ್ಜೆ ಮುಂದೆ ಬಂದು ಅವನಿಗೆ ಸ್ವಾಗತ ಕೊಟ್ಟೆವು. ಟರಾರನೂ ನಮ್ಮನ್ನು ನೋಡಿ ಬಹಳ ಸಂತೋಷವಾಯಿತೆಂದು ಉಪಾಧ್ಯಾಯನ ಮೂಲಕ ತಿಳಿಸಿದನು.

"ನನ್ನ ಸ್ನೇಹಿತರು ಇಷ್ಟು ದೂರ ಬಂದ ವಿಷಯವೇನು? ನನ್ನಿಂದ ಆಗಬೇಕಾದದ್ದೇನಿದೆ?"

ನಾವು ಆವತಿಯ ಪ್ರಾಣವನ್ನು ಬೇಡುವುದಕ್ಕಾಗಿ ಬಂದೆವೆಂದು ಉಪಾಧ್ಯಾಯ ತಿಳಿಸಿದನು.

ಜಾಕಿ ಉಪಾಧ್ಯಾಯನನ್ನು ಕುರಿತು "ಇದನ್ನು ಬೇಡುವ ಹಕ್ಕು ನಮಗಿದೆಯೆಂದು ನಾಯಕನಿಗೆ ತಿಳಿಸಿ. ನಾವು ಆವತಿಯ ಪ್ರಾಣವನ್ನು ಮಾತ್ರವಲ್ಲದೆ, ಟರಾರನ ಮತ್ತು ಅವನ ಜನರ ಪ್ರಾಣವನ್ನೂ ಉಳಿಸಿದ್ದೇವೆ. ಆವತಿ ತನಗೆ ಇಷ್ಟಬಂದವನನ್ನು ಮದುವೆಯಾಗಿ ಸುಖವಾಗಿರಲೆಂದು ನಮ್ಮ ಆಸೆ."

ಉಪಾಧ್ಯಾಯ ಈ ಮಾತನ್ನು ಹೇಳುತ್ತಿರುವಾಗಲೇ ಟರಾರನ ಹುಬ್ಬು ಗಂಟಿಕ್ಕಿತು. ಅವನ ಮುಖ ನೋಡಿದಾಗಲೇ ನಮ್ಮ ಬೇಡಿಕೆಯನ್ನು ಸಲ್ಲಿಸುವುದಿಲ್ಲವೆಂದು ಸ್ಪಷ್ಟವಾಗಿ ಗೊತ್ತಾಯಿತು. ಅವನು ಬಹಳ ಕೋಪದಿಂದ ಏನೋ ಹೇಳಿದನು.

"ಏನು ಹೇಳುತ್ತಾನೆ ಉಪಾಧ್ಯಾಯರೆ?"

"ನಿಮ್ಮ ಮಾತಿಗೆ ಅವನು ಒಪ್ಪುವುದಿಲ್ಲ. ಆವತಿಯನ್ನು ಮದುವೆಮಾಡಿಕೊಡುತ್ತೇನೆಂದು ತನ್ನ ಸ್ನೇಹಿತನಿಗೆ ಭಾಷೆ ಕೊಟ್ಟಿದ್ದಾನಂತೆ. ಆಕೆಯನ್ನು ಕರೆದುಕೊಂಡುಹೋಗುವುದಕ್ಕೆ ಆಗಲೇ ಜನರು ಬಂದಿದ್ದಾರೆ."

ಟರಾರ ತನ್ನ ಹಿಂದೆ ಬಂದಿದ್ದವರ ಕಡೆ ತಿರುಗಿ ಅವರಿಗೆ ಏನೋ ಅಪ್ಪಣೆಮಾಡಿದನು. ಕೂಡಲೆ ಅವರು ತಮ್ಮ ಕುಕ್ಕೆಗಳಲ್ಲಿದ್ದ ಹಣ್ಣು ಹಂಪಲೆಲ್ಲವನ್ನೂ ಅಲ್ಲಿ ರಾಶಿಹಾಕಿದರು.

"ಇದನ್ನೆಲ್ಲಾ ಏನು ಮಾಡುತ್ತಾರೆ?" ಎಂದು ನಾನು ಕೇಳಿದೆ.

"ಯಾರಿಗೋ ಉಡುಗೊರೆಯಾಗಿ ಕೊಡುವುದಕ್ಕೋಸ್ಕರ ತಂದಿರಬೇಕು. ಅದಕ್ಕೇ ಅದನ್ನೆಲ್ಲಾ ಇಲ್ಲಿ ರಾಶಿಹಾಕಿದ್ದಾರೆ."

ಇಬ್ಬರು ಕಿರಾತರು ಯುವತಿಯೊಬ್ಬಳನ್ನು ಕರೆತಂದು ಆ ಹಣ್ಣು ತರಕಾರಿಗಳ ರಾಶಿಯಮೇಲೆ ಅವಳನ್ನು ಕೂರಿಸಿದರು. ಅವಳೇ ಆವತಿಯೆಂದು ಗುರುತಿಸಿದೆವು. ನಮಗೆ ಭಯವೂ ಆಶ್ಚರ್ಯವೂ ಆಯಿತು.

"ಇದೇನು ಉಪಾಧ್ಯಾಯರೆ? ಅವಳನ್ನು ಆ ರಾಶಿಯ ಮೇಲೆ ಕೂರಿಸಿದ್ದರ ಉದ್ದೇಶವೇನು?"

ಉಪಾಧ್ಯಾಯ ಜಾಕಿಯ ಕೈ ಹಿಡಿದುಕೊಂಡು ಬಹಳ ದುಃಖ ದಿಂದ ಹೇಳಿದನು: "ಆಕೆಯ ಕೈಕಾಲು ಕಟ್ಟಿ ಹಣ್ಣುಹಂಪಲಿನ ಜೊತೆಗೆ ಕಳಿಸಿಬಿಡುತ್ತಾರೆ. ಪಾಪ, ಅವಳ ಗತಿ ಹೇಗಾಗುತ್ತೋ ಕಾಣೆ."

ಜಾಕಿಗೆ ಕೋಪ ಮಿತಿಮೀರಿತು. "ಹಾಗೇನು?" ಎಂದು ಕೂಗಿ ಉಪಾಧ್ಯಾಯನನ್ನು ಒಂದು ಕಡೆ ತಳ್ಳಿ ದಾರಿಯಲ್ಲಿದ್ದ ಕಿರಾತರನ್ನು ನೂಕಿಕೊಂಡು ರಾಶಿಯ ಬಳಿಗೆ ನೆಗೆದು ಹೋದನು. ಕೂಡಲೆ ಅವತಿ ಯನ್ನು ರಾಶಿಯ ಮೇಲಿಂದ ಇಳಿಸಿ ಒಂದು ಮರದ ಹತ್ತಿರ ನಿಲ್ಲಿಸಿದನು. ಕಣ್ಣುಗಳು ಕೋಪದಿಂದ ಉರಿಯುತ್ತಿದ್ದುವು. ಕಿರಾತನೊಬ್ಬನ ಕೈಯಿಂದ ಲಾಠಿಯನ್ನು ಕಿತ್ತುಕೊಂಡು ಅದನ್ನು ಬೀಸುತ್ತಾ "ಬನ್ನಿ, ನಿಮ್ಮ ಊರಿನವರೆಲ್ಲಾ ಬನ್ನಿ, ಏನು ಮಾಡುತ್ತೀರೋ ನೋಡಿಯೇ ಬಿಡುತ್ತೇನೆ." ಎಂದು ಕೂಗಿದನು.

ಕ್ಷಣಕಾಲ ಕಿರಾತರೆಲ್ಲರೂ ಆಶ್ಚರ್ಯದಿಂದ ಮೂಕರಾಗಿ ನಿಂತರು. ಮರುಕ್ಷಣವೇ ಎಲ್ಲರೂ ಕೂಗಿಕೊಂಡರು. ಲಾಠಿಗಳನ್ನೂ ಈಟಿಗಳನ್ನೂ ಎತ್ತಿಕೊಂಡು ಜಾಕಿಯ ಮೇಲೆ ನುಗ್ಗಿದರು. ಇನ್ನೊಂದು ನಿಮಿಷದಲ್ಲಿ ಜಾಕಿ ಈಟಿಯ ತಿವಿತದಿಂದ ಸಾಯಬೇಕು; ಅವನ ರಕ್ತ ನೆಲದ ಮೇಲೆ ಹರಿಯಬೇಕು. ಆಗ ಉಪಾಧ್ಯಾಯ ಥಟ್ಟನೆ ಓಡಿಬಂದು ಜಾಕಿಯ ಮುಂದೆ ನಿಂತು ಕಿರಾತರನ್ನು ತಡೆದನು.

"ನಿಲ್ಲಿ, ಈ ವಿಷಯದಲ್ಲಿ ನೀವು ಪ್ರವೇಶಿಸಬಾರದು. ನೀವೆಲ್ಲಾ ಟರಾರನ ಸೇವಕರು ಮಾತ್ರ, ಅಲ್ಲವೆ? ಈ ಯುವಕ ಬದುಕಬೇಕೋ ಸಾಯಬೇಕೋ ಎಂದು ನಿಶ್ಚಯಿಸುವುದಕ್ಕೆ ನಿಮ್ಮ ನಾಯಕನಿದ್ದಾನೆ. ಅವನ ಅಧಿಕಾರವನ್ನು ನೀವು ವಹಿಸಬಾರದು!"

ಕಿರಾತರು ಸುಮ್ಮನೆ ನಿಂತರು. ಉಪಾಧ್ಯಾಯ ತನ್ನ ಅಧಿಕಾರಕ್ಕೆ ಮನ್ನಣೆಕೊಟ್ಟಿದ್ದರಿಂದ ಟರಾರನಿಗೆ ಸಂತೋಷವಾಗಿರಬಹುದು; ಅಥವಾ ಹಿಂದೆ ಕಷ್ಟಕಾಲದಲ್ಲಿ ಜಾಕಿ ತನ್ನ ಪ್ರಾಣವನ್ನು ಕಾಪಾಡಿದ ನೆನಪು ಮನಸ್ಸಿಗೆ ಅಲ್ಪಸ್ವಲ್ಪ ಬಂದಿರಬಹುದು. ಅಂತೂ ಟರಾರ ತನ್ನ

ಸೇವಕರ ಕಡೆ ತಿರುಗಿ "ಹಿಂದೆ ನಿಲ್ಲಿ. ಈ ಯುವಕನ ಜೀವ ನನಗೆ ಸೇರಿದ್ದು." ಎಂದು ಹೇಳಿ ಅನಂತರ ಜಾಕಿಯನ್ನು ಕುರಿತು "ಈ ನಡ ವಳಿಕೆಯಿಂದ ನಿನ್ನ ಸ್ವಾತಂತ್ರ್ಯಹೋಯಿತು. ನಿನ್ನ ಜೀವ ನನ್ನ ಕೈ ಸೇರಿದೆ. ಸುಮ್ಮನೆ ಶರಣಾಗತನಾಗು. ನೀನಿರುವವನು ಒಬ್ಬ; ನನ್ನ ಹಿಂದೆ ಸಾವಿರಾರು ಜನರಿದ್ದಾರೆ. ಅನ್ಯಾಯವಾಗಿ ಪ್ರಾಣಬಿಡಬೇಡ."ಎಂದನು.

ಜಾಕಿಯ ಕೋಪ ಮತ್ತಷ್ಟು ಕೆರಳಿತು.

"ಕೇಡಿಗ! ನಾನು ಸಾಯುವವದಕ್ಕೆ ಹೆದರುವವನಲ್ಲ. ಆದರೆ ಸಾಯುವುದಕ್ಕೆ ಮುಂಚೆ ನಿಮ್ಮಲ್ಲಿ ಕೆಲವರನ್ನಾದರೂ ಆಹುತಿ ತೆಗೆದು ಕೊಳ್ಳುತ್ತೇನೆ. ಆವತಿಗೆ ಏನೂ ಕೆಡಕುಮಾಡುವುದಿಲ್ಲವೆಂದು ಭಾಷೆ ಕೊಡುವವರೆಗೂ ನಾನು ಶರಣಾಗತನಾಗುವದಿಲ್ಲ."

"ನೀನು ಶುದ್ಧ ಮೂರ್ಖ. ಆದರೂ ನಿನ್ನ ಮಾತಿಗೆ ಸ್ವಲ್ಪ ಮನ್ನಣೆಕೊಡುತ್ತೇನೆ. ಇನ್ನು ಮೂರುದಿನ ಮಟ್ಟಿಗೆ ಆವತಿಯನ್ನು ಕಳುಹಿಸುವುದಿಲ್ಲ."

"ಟರಾರನ ಮಾತಿಗೆ ಒಪ್ಪಿಕೊಳ್ಳಿ. ಈಗ ಜಗಳಕ್ಕೆ ನಿಂತರೆ ಅವನು ನಿಮ್ಮನ್ನು ಕೊಂದುಹಾಕುತ್ತಾನೆ. ಆವತಿಗೂ ಉಪಕಾರ ವಾದಂತಾಗುವುದಿಲ್ಲ. ಮೂರುದಿನ ಅವಕಾಶ ಸಿಕ್ಕಿದೆಯಲ್ಲ, ಮುಂದೇ ನಾಗುವುದೋ ನೋಡೋಣ." ಎಂದು ಉಪಾಧ್ಯಾಯ ಬೇಡಿಕೊಂಡನು.

ಜಾಕಿ ಸ್ವಲ್ಪ ಯೋಚಿಸಿದನಂತರ ತನ್ನ ಲಾಠಿಯನ್ನು ನೆಲಕ್ಕೆ ಎಸೆದು ತಲೆ ಬಗ್ಗಿಸಿದನು. ಟರಾರನಿಗೆ ಇದನ್ನು ನೋಡಿ ಸಂತೋಷ ವಾಯಿತು. ಉಪಾಧ್ಯಾಯನನ್ನು ಕರೆದು "ಆತನಿಗೆ ಬುದ್ಧಿ ಹೇಳಿ. ಅವನಿಗೆ ಕೆಡಕು ಮಾಡುವುದಕ್ಕೆ ನನಗೆ ಮನಸ್ಸಿಲ್ಲ. ಅವನು ನನಗೆ ಮಾಡಿದ ಉಪಕಾರವನ್ನು ಮರೆತಿಲ್ಲ." ಎಂದನು.

ಉಪಾಧ್ಯಾಯ ಇದನ್ನು ನಮಗೆ ಹೇಳಿದ್ದಲ್ಲದೆ ಹತ್ತಿರವೇ ಇದ್ದ ಆವತಿಗೆ ಮಾತ್ರ ಕೇಳುವಂತೆ ಅವಳಿಗೂ ಏನೋ ಒಂದು ಮಾತು ಹೇಳಿದನು. ಟರಾರ ಮುಂದೆ ಬಂದು ಆವತಿಯ ಕೈಹಿಡಿದು ಕರೆದು ಕೊಂಡು ಹೋದನು. ಉಪಾಧ್ಯಾಯನೊಡನೆ ನಾವು ಮೂವರೂ ಹಡಗಿಗೆ ಹಿಂತಿರುಗಿದೆವು.

೧೫

## ಕಿರಾತರ ಸೆರೆಯಲ್ಲಿ

ಹಡಗಿಗೆ ಬಂದಮೇಲೆ ಜಾಕಿ ತನ್ನ ಕೊಠಡಿಗೆ ಹೋಗಿ ಖಿನ್ನನಾಗಿ ಹಾಸಿಗೆಯ ಮೇಲೆ ಬಿದ್ದುಕೊಂಡನು. ಆದರೆ ಉಪಾಧ್ಯಾಯ ಅವನ ಹತ್ತಿರದಲ್ಲೇ ಕುಳಿತು ಸಮಾಧಾನಮಾಡಿ ಧೈರ್ಯ ಹೇಳಿದನು.

"ಸುಮ್ಮನೆ ಕೋಪಗೊಂಡರೆ ನಮ್ಮ ಕೆಲಸ ಸಾಗುವುದಿಲ್ಲ, ಜಾಕಿ. ನಾನು ಹೇಳಿದಂತೆ ಕೇಳುವುದಾದರೆ. . . ."

"ಏನು, ನೀವು ಹೇಳುವುದು ?"

"ಆವತಿಯನ್ನು ಉಳಿಸುವುದಕ್ಕೆ ಒಂದು ದಾರಿಯೇನೋ ಹೊಳೆದಿದೆ. ಅದರಲ್ಲಿ ಅಪಾಯವಿದೆ. ಆದರೆ ನೀವೇನೂ ಅಂಜುಕುಳಿಗಳಲ್ಲವಲ್ಲ! ಇಲ್ಲಿಗೆ ಐವತ್ತು ಮೈಲಿ ದೂರದಲ್ಲಿ ಒಂದು ದ್ವೀಪವಿದೆ. ಅಲ್ಲಿಯ ಕಿರಾತರೆಲ್ಲ ಒಳ್ಳೆಯ ಸ್ವಭಾವದವರು. ಅವರ ನಾಯಕನೇ ನಮ್ಮ ಆವತಿಯ ಪ್ರೇಮಿ. ಅಲ್ಲಿಗೆ ತಲಪಿಸಿಬಿಟ್ಟರೆ ಮುಂದೆ ಅವಳಿಗೇನೂ ತೊಂದರೆಯಿಲ್ಲ. ಈಗ ನನ್ನ ಉಪಾಯ ಹೇಳುತ್ತೇನೆ—ನೀವು ಹಡಗನ್ನು ಬಿಟ್ಟುಬಿಡುವುದಕ್ಕೆ ಒಪ್ಪುತ್ತೀರೋ ? ನಿಮಗೆ ಬಹಳ ನಷ್ಟವೇನೋ ಆಗುತ್ತೆ. ಆದರೆ. . . ."

"ಉಪಾಧ್ಯಾಯರೆ, ಒಂದು ಕೆಲಸಕ್ಕೆ ಕೈಹಾಕಿದಮೇಲೆ ಕಷ್ಟನಷ್ಟಗಳಿಗೆ ಸಿದ್ಧರಾಗಿರಬೇಕು. ಆ ಬಡ ಹುಡುಗಿಯ ಪ್ರಾಣ ಉಳಿಯುವುದಾದರೆ ನಾನು ಹಡಗಿನ ನಷ್ಟವನ್ನು ಲೆಕ್ಕಿಸುವುದಿಲ್ಲ."

"ಸರಿ ಹಾಗಾದರೆ. ಆವತಿಗೋಸ್ಕರ ನೀವು ಹಡಗನ್ನು ಕಳೆದುಕೊಳ್ಳುತ್ತೀರೆಂದು ಈ ಕಿರಾತರು ಕನಸಿನಲ್ಲಿಯೂ ಎಣಿಸುವುದಿಲ್ಲ. ಅದು ಇರುವವರೆಗೂ ನೀವೂ ಇದ್ದೀರೆಂದೇ ನಂಬುತ್ತಾರೆ. ನಾನು ನಿಮಗೋಸ್ಕರ ಒಂದು ತೋಡು ದೋಣಿಯನ್ನು ಸಿದ್ಧಮಾಡುತ್ತೇನೆ. ಅದರಲ್ಲಿ ಆವತಿಯನ್ನು ಕರೆದುಕೊಂಡು ಹೊರಟುಹೋಗಿ. ಕಿರಾತರ ಕಣ್ಣಿಗೆ ಕಾಣುವಂತೆ ಹಡಗು ಇಲ್ಲೇ ಇರಲಿ."

"ಆದರೆ ಆವತಿಯನ್ನು ಕರೆತರುವುದು ಹೇಗೆ? ಅವಳು ಸೆರೆ

ಮನೆಯಲ್ಲಿದ್ದಾಳಲ್ಲ!"

"ಅದಕ್ಕೆ ನಾನು ಏರ್ಪಾಡು ಮಾಡುತ್ತೇನೆ. ಅಲ್ಲಿಂದ ತಪ್ಪಿಸಿಕೊಂಡು ನಾನು ಗೊತ್ತುಮಾಡುವ ಸ್ಥಳಕ್ಕೆ ಬರುತ್ತಾಳೆ. ಕಿರಾತರು ಅವಳನ್ನು ಅಷ್ಟೇನೂ ಜಾಗರೂಕತೆಯಿಂದ ನೋಡಿಕೊಳ್ಳುತ್ತಿಲ್ಲ. ದ್ವೀಪದಿಂದ ತಪ್ಪಿಸಿಕೊಂಡು ಹೋಗುವುದು ಅಸಾಧ್ಯವೆಂದು ಅವರ ನಂಬಿಕೆ."

ರಾತ್ರಿ ಕತ್ತಲಾದ ಮೇಲೆ ನಾವು ಹಡಗನ್ನು ಬಿಟ್ಟು ದಡಕ್ಕೆ ಬಂದೆವು. ಹಳ್ಳಿಯ ಹತ್ತಿರ ಹೋಗದೆ ಸುತ್ತುದಾರಿಯಲ್ಲಿ ನಡೆದು, ಮೊದಲೇ ಗೊತ್ತುಮಾಡಿದ್ದ ಸ್ಥಳಕ್ಕೆ ಉಪಾಧ್ಯಾಯ ನಮ್ಮನ್ನು ಕರೆದುಕೊಂಡುಹೋದನು. ಐದು ನಿಮಿಷ ಕಾಯುವುದರೊಳಗೆ ಬೇರೊಂದು ದಾರಿಯಿಂದ ಆವತಿಯೂ ಬಂದಳು.

"ಆವತಿ ಬಂದಳೋ? ಉಪಾಧ್ಯಾಯರೇ, ನಮ್ಮ ಉದ್ದೇಶವನ್ನು ಆಕೆಗೆ ತಿಳಿಸಿ." ಎಂದು ಜಾಕಿ ಕೇಳಿದನು

"ನನಗೆ ಸ್ವಲ್ಪ ಇಂಗ್ಲೀಷು ಬರುತ್ತೆ." ಎಂದಳು ಆವತಿ, ಮೆಲ್ಲನೆ.

ಜಾಕಿಗೆ ಆಶ್ಚರ್ಯವಾಯಿತು. "ನಿಜವೇ? ನಮ್ಮ ದ್ವೀಪಕ್ಕೆ ಬಂದಿದ್ದಾಗ ಮೂಕಿಯ ಹಾಗೆ ಕೂತಿದ್ದೆ!"

"ಅಲ್ಲಿಂದ ಬಂದಮೇಲೆ ನಾನು ಸ್ವಲ್ಪ ಹೇಳಿಕೊಟ್ಟೆ." ಎಂದ, ಉಪಾಧ್ಯಾಯ.

ನಾವು ಮಾಡಿದ್ದ ಉಪಾಯವನ್ನು ಆವತಿಗೆ ವಿವರವಾಗಿ ಹೇಳಿದೆವು. ಟರಾರನ ಕೈಯಿಂದ ತಪ್ಪಿಸಿಕೊಳ್ಳುವುದಕ್ಕೆ ಅವಳು ಯಾವ ಅಪಾಯವನ್ನಾದರೂ ಎದುರಿಸಲು ಸಿದ್ಧಳಾಗಿದ್ದಳು. ಇದು ನಿಶ್ಚಯವಾದ ಮೇಲೆ, ಮಾರನೆಯ ದಿನ ರಾತ್ರಿ ಅದೇ ಸ್ಥಳದಲ್ಲಿ ಸೇರುವುದೆಂದು ಗೊತ್ತುಮಾಡಿಕೊಂಡು ನಾವು ಹಡಗಿಗೆ ವಾಪಸು ಬಂದೆವು. ಆವತಿ ತನ್ನ ಸೆರೆಮನೆಗೆ ಹೋದಳು.

ನಾವು ಹೊರಡುವ ಕಾಲ ಹತ್ತಿರ ಬಂದ ಹಾಗೆಲ್ಲಾ ನಮ್ಮ ಉದ್ದೇಶ ಕಿರಾತರಿಗೆ ಎಲ್ಲಿ ಗೊತ್ತಾದೀತೋ ಎಂದು ನಮ್ಮ ಕಳವಳ ಹೆಚ್ಚಿತು. ಆ ದಿನ ಯಾವ ತೊಂದರೆಯೂ ಇಲ್ಲದೆ ಹಗಲು ಕಳೆಯಿತು.

ನಡುರಾತ್ರಿಯ ಹೊತ್ತಿಗೆ ನಾವು ಸ್ವಲ್ಪ ಆಹಾರ ಪದಾರ್ಥಗಳನ್ನು ತೆಗೆದುಕೊಂಡು ಹಡಗಿನಿಂದಿಳಿದೆವು. ಸ್ವಲ್ಪವೂ ಸದ್ದಾಗದಂತೆ ದೋಣಿಯನ್ನು ನಡೆಸಿ ಹಿಂದಿನ ದಿನ ಆವತಿಯನ್ನು ಕಂಡ ಸ್ಥಳಕ್ಕೆ ಹೋದೆವು. ಅಲ್ಲಿ ಯಾರೋ ಬಂದು ನಿಂತಿದ್ದರು.

"ಯಾರು, ಆವತಿಯೆ?"

"ಹೌದು, ನಾನೇ."

"ಸರಿ. ದೋಣಿಯನ್ನು ಹತ್ತು." ಎಂದು ಜಾಕಿ ಮೆತ್ತನೆಯ ದನಿಯಲ್ಲಿ ಹೇಳಿದನು.

ನಮಗೆ ಅಷ್ಟೊಂದು ಸಹಾಯಮಾಡಿದ ಉಪಾಧ್ಯಾಯನನ್ನು ಕೈಕುಲುಕಿ ಬೀಳ್ಕೊಂಡು ದೋಣಿಯಲ್ಲಿ ಕುಳಿತು ಹೊರಟೆವು. ದೋಣಿ ಅಂಬಿನ ವೇಗದಿಂದ ಸಾಗಿತು.

ರಾತ್ರಿಯೂ ಮಾರನೆಯ ದಿನವೂ ನಾವು ಒಂದೇ ಸಮ ಹುಟ್ಟು ಹಾಕುತ್ತಾ ಪ್ರಯಾಣ ಮಾಡಿದೆವು. ತಿಂಡಿ ತಿನ್ನುವುದಕ್ಕಾಗಿ ಒಂದೆರಡು ಸಲ ಮಾತ್ರ ಕೆಲವು ನಿಮಿಷ ವಿಶ್ರಾಂತಿ. ನಾವು ತಲಪ ಬೇಕಾದ ದ್ವೀಪ ಎಲ್ಲಿದೆಯೆಂಬುದನ್ನು ಜಾಕಿ ಚೆನ್ನಾಗಿ ತಿಳಿದುಕೊಂಡು ಬಂದಿದ್ದನು. ನಮ್ಮ ಹತ್ತಿರ ಉತ್ತರಮುಖಿಯಿದ್ದುದರಿಂದ ದೋಣಿಯನ್ನು ಆ ಕಡೆಗೇ ನಡೆಸುವುದು ಕಷ್ಟವಾಗಲಿಲ್ಲ.

ಸಂಜೆಯ ಹೊತ್ತಿಗೆ ಜಾಕಿ ತನ್ನ ಹುಟ್ಟನ್ನು ಕೆಳಗೆ ಹಾಕಿದ.

"ನಾವು ಟರಾಂಗನ ದ್ವೀಪದಿಂದ ಬಹಳ ದೂರ ಬಂದಿದ್ದೇವೆ. ಇನ್ನೇನೂ ಭಯವಿಲ್ಲ. ಹೊಟ್ಟೆಗೆ ಏನಾದರೂ ಆಧಾರ ಮಾಡಿಕೊಂಡು ಸುಖವಾಗಿ ನಿದ್ದೆ ಮಾಡೋಣ."

ನಮಗೆಲ್ಲರಿಗೂ ಆಯಾಸವಾಗಿದ್ದುದರಿಂದ ಬೇಗ ನಿದ್ದೆ ಬಂತು.

ಬೆಳಕು ಹರಿಯುವ ಹೊತ್ತಿಗೆ ಪೀಟರ್ ಭಯದಿಂದ ಕೂಗಿಕೊಂಡು ದಿಗಂತದ ಕಡೆ ಕೈತೋರಿಸಿದ. ದೊಡ್ಡದೊಂದು ಯುದ್ಧದ ದೋಣಿ ನಮ್ಮನ್ನು ಅಟ್ಟಿಸಿಕೊಂಡು ಬರುತ್ತಿತ್ತು. ಒಡನೆಯೇ ನಾವೆಲ್ಲರೂ ಹುಟ್ಟು ತೆಗೆದುಕೊಂಡು ಕೆಲಸಕ್ಕೆ ತೊಡಗಿದೆವು. ಆದರೆ ತಪ್ಪಿಸಿಕೊಳ್ಳುವುದು ಸಾಧ್ಯವಾಗಿರಲಿಲ್ಲ. ಕಿರಾತರ ದೋಣಿ ನಮ್ಮ

ದಕ್ಕಿಂತ ಜಾಗ್ರತೆಯಾಗಿ ಸಾಗಿಬರುತ್ತಿತ್ತು. ಎರಡು ಮೂರು ಘಂಟೆಯ ಕಾಲದ ಮೇಲೆ ಅದು ಹತ್ತಿರ ಬಂದು ನಮ್ಮ ದೋಣಿಗೆ ಬಡಿಯಿತು. ಕೂಡಲೆ ನಾವೆಲ್ಲರೂ ಸೆರೆಗೆ ಬಿದ್ದೆವು.

ಅದಾದ ಮೇಲೆ ಸ್ವಲ್ಪ ಹೊತ್ತು ನನಗೆ ಜ್ಞಾನ ತಪ್ಪಿತು. ಮತ್ತೆ ಎಚ್ಚರವಾದಾಗ ನಾನು ಕೈಕಾಲು ಕಟ್ಟಿ ಕಿರಾತರ ದೋಣಿಯಲ್ಲಿ ಬಿದ್ದಿದ್ದೆ. ಪಕ್ಕದಲ್ಲೇ ಜಾಕಿ ಪೀಟರ್ ಇಬ್ಬರೂ ನನ್ನ ಹಾಗೆಯೇ ಬಿದ್ದಿದ್ದರು.

ಆ ದಿನವೆಲ್ಲಾ ಹಾಗೆಯೇ ಪ್ರಯಾಣ ನಡೆಯಿತು. ಕಿರಾತರು ರಾತ್ರಿ ಒಂದು ಘಂಟೆಯ ಕಾಲ ಮಾತ್ರ ಕುಳಿತು ಹಾಗೆಯೇ ನಿದ್ದೆ ಮಾಡಿ ಮತ್ತೆ ಮುಂದೆ ಸಾಗಿದರು. ಮಂಗೋ ದ್ವೀಪಕ್ಕೆ ಬರುವ ಹೊತ್ತಿಗೆ ಬೆಳಕು ಹರಿದಿತ್ತು. ನೆಲದಮೇಲೆ ಕಾಲಿಟ್ಟ ಕೂಡಲೆ ನಮ್ಮನ್ನು ಕಿರಾತನ ಬಳಿಗೆ ಎಳೆದುಕೊಂಡು ಹೋದರು. ಕಿರಾತ ಮಿತಿ ಮೀರಿದ ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಕೂತಿದ್ದನು. ನಮ್ಮನ್ನು ಕಂಡೊಡನೆ "ನಿಮ್ಮ ಅಪರಾಧಕ್ಕೆ ಕ್ಷಮೆಯಿಲ್ಲ. ನಿಮ್ಮನ್ನು ಕೊಲ್ಲಬೇಕೆಂದು ತೀರ್ಮಾನ ಮಾಡಿದ್ದೇನೆ." ಎಂದು ಹೇಳಿ ತನ್ನ ಸೇವಕರ ಕಡೆ ನೋಡಿ ಏನೋ ಸನ್ನೆ ಮಾಡಿದನು. ಅವರು ನಮ್ಮನ್ನು ಮರದ ಬಳಿ ಇದ್ದ ಗುಹೆಯೊಂದರಲ್ಲಿ ಬಂಧಿಸಿ ಬಾಗಿಲು ಹಾಕಿಕೊಂಡು ಹೋದರು.

## ೧೮

## ಕಿರಾತನ ಕೃತಜ್ಞತೆ

ಒಂದುವಾರ ಹಾಗೆಯೇ ಸೆರೆಯಲ್ಲಿ ಬಿದ್ದಿದ್ದೆವು. ಆ ಕಾಲದಲ್ಲಿ ನಮಗೆ ನಿತ್ಯ ಆಹಾರ ತರುತ್ತಿದ್ದ ಕಿರಾತನ ಹೊರತು ಮತ್ತೊಬ್ಬರ ಮುಖದರ್ಶನವಿಲ್ಲ. ಎಂಟನೆಯ ದಿನ ಬೆಳಗ್ಗೆ ಆ ಕಿರಾತ ಆಹಾರ ತರುವ ಬದಲು ಕೈಯಲ್ಲಿ ಚೂರಿಯನ್ನು ಹಿಡಿದು ಒಳಗೆ ಬಂದು ನಮ್ಮೆಲ್ಲರನ್ನೂ ಕಟ್ಟಿದ್ದ ಹಗ್ಗಗಳನ್ನು ಕತ್ತರಿಸಿ ಹಾಕಿದ. ನಾವು ಆಶ್ಚರ್ಯದಿಂದ ಬೆಪ್ಪರಂತೆ ಅವನ ಮುಖ ನೋಡುತ್ತ ನಿಂತೆವು.

"ಬಹುಶಃ ನಮ್ಮನ್ನು ಕೊಲ್ಲುವುದಕ್ಕೆ ಕರೆದುಕೊಂಡು ಹೋಗುತ್ತಾನೆ" ಎಂದು ನಾನು ಭಯಗೊಂಡೆ. ಕಿರಾತನು ತನ್ನ ಹಿಂದೆ ಬರಬೇಕೆಂದು ಸನ್ನೆಮಾಡಿ ಗುಹೆಯ ಬಾಗಿಲು ತೆಗೆದ. ಹೊರಗೆ ಒಂದು ಮರದ ಕೆಳಗೆ ನಮ್ಮ ಸ್ನೇಹಿತನಾದ ಉಪಾಧ್ಯಾಯ ನಿಂತಿದ್ದ. ಅವನ ಕಣ್ಣು ಕಂಬನಿ ಯಿಂದ ಮಂಜಾಗಿತ್ತು. ನಮ್ಮನ್ನು ಕಂಡೊಡನೆ ಹಾರಿಬಂದು ಜಾಕಿ ಯನ್ನು ಅಪ್ಪಿಕೊಂಡು "ಜಾಕಿ, ದೇವರು ದೊಡ್ಡವನು. ಅವನ ದಯ ದಿಂದ ನೀವು ಬದುಕಿದಿರಿ.'' ಎಂದನು.

"ಹಾಗೆಂದರೆ? ಟರಾರ ನಮ್ಮನ್ನು ಸೆರೆಯಿಂದ ಬಿಟ್ಟುಬಿಡುತ್ತಾ ನೇನು?"

"ಸೆರೆಯಿಂದ ಬಿಡುವುದು ಮಾತ್ರವಲ್ಲ, ನಿಮಗೆ ಉಪಚಾರಮಾಡಿ ನಿಮ್ಮ ಕ್ಷಮೆ ಬೇಡಬೇಕೆಂದಿದ್ದಾನೆ. ಬನ್ನಿ, ಅವನ ಮನೆಗೆ ಹೋಗೋಣ. ಉಳಿದ ವಿಷಯವನ್ನೆಲ್ಲಾ ಆಮೇಲೆ ಹೇಳುತ್ತೇನೆ."

ನಮ್ಮ ಸಂತೋಷ ಹೇಳಿತೀರದು. ಕೂಡಲೇ ಹೊರಟು ಟರಾರನ ಮನೆಯನ್ನು ಸೇರಿದೆವು. ಟರಾರ ಚಾಪೆಯಮೇಲೆ ಕೂತಿದ್ದವನು ಎದ್ದುಬಂದು ನಮ್ಮ ಕೈಕುಲುಕಿ ಕುಳಿತುಕೊಳ್ಳಹೇಳಿ, "ಉಪಾ ಧ್ಯಾಯರೆ, ಜಾಕಿಗೆ ನಡೆದ ವಿಷಯವನ್ನೆಲ್ಲಾ ತಿಳಿಸಿದಿರಾ?" ಎಂದ. ಆಗ ಉಪಾಧ್ಯಾಯ ಎಲ್ಲವನ್ನೂ ತಿಳಿಸಿದ.

ನಾವು ಮಂಗೋ ದ್ವೀಪಕ್ಕೆ ಬಂದ ದಿನದಿಂದ ಟರಾರನ ಮನಸ್ಸಿನಲ್ಲಿ ದೊಡ್ಡ ಗೊಂದಲವೆದ್ದಿತು. ನಾವು ಅವನನ್ನೂ ಅವನ ಕಡೆಯವರನ್ನೂ ಸಾವಿನಿಂದ ಕಾಪಾಡಿದ್ದನ್ನು ಕ್ಷಣಕಾಲವೂ ಅವನು ಮರೆತಿರಲಿಲ್ಲ. ಆದರೂ ನಮ್ಮಲ್ಲಿ ಅಸಮಾಧಾನದಿಂದಲೇ ನಡೆದು ಕೊಂಡನು. ಅದಕ್ಕೆ ಕಾರಣ ಬೇರೆ ಇತ್ತು. ರೋಮಟನ ದ್ವೀಪದಲ್ಲಿ ನನ್ನನ್ನು ನೋಡಿದಾಗ ಟರಾರ ಬಹಳ ಸಂತೋಷವನ್ನು ತೋರಿಸಿ ದ್ದಲ್ಲದೆ ತನ್ನ ಕೃತಜ್ಞತೆಯನ್ನು ರೋಮಟನೊಡನೆಯೂ ಹೇಳಿಕೊಂಡಿ ದ್ದನು. ರೋಮಟ "ಈ ಜನರನ್ನು ನಂಬಬೇಡ. ಅವರೆಲ್ಲರೂ ಮೋಸಗಾರರು." ಎಂದು ನಮ್ಮ ಜನಾಂಗವನ್ನೇ ದೂಷಣೆ ಮಾಡಿದ್ದರೂ ಟರಾರನಿಗೆ ನಮ್ಮ ಮೇಲಿನ ಪ್ರೀತಿಯೂ ಕೃತಜ್ಞತೆಯೂ ಕಡಮೆ

ಯಾಗಲಿಲ್ಲ. "ನನಗೆ ಜೀವದಾನ ಮಾಡಿದವರನ್ನು ನನ್ನೆದುರಿಗೆ ಬಯ್ಯಬೇಡ" ಎಂದು ರೋಮುಟನಿಗೆ ಕಠಿನವಾಗಿ ಉತ್ತರಕೊಟಿದ್ದನಂತೆ. ಆದರೆ ಕ್ಯಾಪ್ಟನ್ನನು ಮೋಸದಿಂದ ಕಿರಾತರನ್ನು ಕೊಂದು ಗಂಧದ ಮರವನ್ನು ಕದ್ದುಕೊಂಡು ಹೋಗಬೇಕೆಂದು ತಂತ್ರ ಹೂಡಿದ್ದು ಟರಾರನ ಮನಸ್ಸನ್ನು ಬದಲಾಯಿಸಿತು. ರೋಮುಟ ಹೇಳಿದ್ದು ನಿಜ ವೆಂದೂ ನಮ್ಮ ಜನರನ್ನು ನೆಚ್ಚಬಾರದೆಂದೂ ಅವನಿಗೂ ತೋರಿತು. ಕ್ಯಾಪ್ಟನ್ನನ ಹಡಗಿನಲ್ಲಿ ನಾನೂ ಇದ್ದುದರಿಂದ ಅವನಿಗೆ ನನ್ನಲ್ಲಿಯೂ ಮರ್ಯಾದೆ ಉಳಿಯಲಿಲ್ಲ. ಹಡಗಿನವರೆಲ್ಲರಂತೆ ನಾನೂ ಕಡಲುಗಳ್ಳ ನೆಂದೇ ಭಾವಿಸಿದ. ನಾವು ಮೂವರೂ ಕಳ್ಳರ ಹಡಗಿನಲ್ಲೇ ಮಂಗೋ ದ್ವೀಪಕ್ಕೆ ಬಂದದ್ದು ನೋಡಿ ನಮ್ಮ ವಿಷಯದಲ್ಲಿ ದುರಭಿಪ್ರಾಯ ಮತ್ತೂ ಹೆಚ್ಚಾಯಿತು. ತನಗೆ ನಮ್ಮಿಂದ ಉಪಕಾರವಾಗಿದ್ದುದೇನೋ ನಿಜ. ಆದರೆ ನಾವು ಕಿರಾತ ಜನಾಂಗಕ್ಕೇ ಶತ್ರುಗಳು, ನಮ್ಮಲ್ಲಿ ಸ್ನೇಹ ದಿಂದಿರುವುದು ತಪ್ಪು—ಎಂದು ಅವನ ತರ್ಕ. ಆದ್ದರಿಂದಲೇ ನಾವು ಅವನನ್ನು ನೋಡಬೇಕೆಂದು ಇಷ್ಟಪಟ್ಟಾಗ ಅವನು ದೂರವಾಗಿಯೇ ಇದ್ದದ್ದು. ಇಷ್ಟಾದರೂ ನಮ್ಮ ವಿಷಯದಲ್ಲಿ ಅವನಿಗೆ ಕೃತಜ್ಞತೆ ಹೋಗಿರಲಿಲ್ಲ. ಆದ್ದರಿಂದಲೇ ಅವನು ಜಾಕಿಯನ್ನು ಕೊಲ್ಲದೆ ಉಳಿಸಿದ. ನಾವು ಆವತಿಯೊಡನೆ ತಪ್ಪಿಸಿಕೊಂಡು ಹೋದಮೇಲೆ ಅವನ ಕೋಪ ಮಿತಿಮೀರಿತು. ಆದರೆ ನಾವು ಸೆರೆಸಿಕ್ಕಿದಮೇಲೂ ನಮ್ಮನ್ನು ಕೊಲ್ಲಲು ಮನಸ್ಸುಬಾರದೆ ಕಾಲ ತಳ್ಳುತ್ತಿದ್ದನು. ಹಿಂದಿನ ದಿನ ಉಪಾಧ್ಯಾಯ ಅವನ ಬಳಿಗೆ ಹೋಗಿ ನಮ್ಮನ್ನು ಬಿಟ್ಟುಬಿಡ ಬೇಕೆಂದು ಬಹಳ ಬೇಡಿಕೊಂಡನಂತೆ. ಆಗ ಟರಾರ ಇದೆಲ್ಲವನ್ನೂ ತಿಳಿಸಿ, "ಇಂಥ ಜನರನ್ನು ಸುಮ್ಮನೆ ಬಿಡುವುದು ನ್ಯಾಯವಲ್ಲ. ಅವರಿಗೆ ಶಿಕ್ಷೆಯಾಗಲೇಬೇಕು" ಎಂದನು.

ಉಪಾಧ್ಯಾಯನಿಗೆ ನಮ್ಮ ಮತ್ತು ಕಡಲುಗಳ್ಳರ ಕಥೆಯನ್ನೆಲ್ಲಾ ಜಾಕಿ ಹೇಳಿದ್ದ. ಅವನು ಟರಾರನಿಗೆ ಉತ್ತರವಾಗಿ "ನೀನು ತಪ್ಪು ತಿಳಿದಿದ್ದೀಯೆ. ಅವರು ಕಡಲುಗಳ್ಳರಲ್ಲ; ನಿಮ್ಮ ಜನಾಂಗಕ್ಕೆ ಶತ್ರು ಗಳೂ ಅಲ್ಲ. ಹಾಗಿದ್ದರೆ ಅವರು ತಮ್ಮ ಪ್ರಾಣಹೋದರೂ ಹೋಗಲೆಂದು

ನಿಮ್ಮ ಸಹಾಯಕ್ಕೇಕೆ ಬರಬೇಕಾಗಿತ್ತು? ರೋವರ್ ಕಳ್ಳರ ಜೊತೆಯಲ್ಲಿದ್ದುದಕ್ಕೆ ಕಾರಣ ಬೇರೆ." ಎಂದು ನಾನು ಕಳ್ಳರಿಗೆ ಸೆರೆ ಸಿಕ್ಕಿದ ವಿಷಯವನ್ನೆಲ್ಲಾ ಹೇಳಿದ. ಆಮೇಲೆ ಟರಾರನಿಗೆ ತಾನುಮಾಡಿದ್ದು ಅನ್ಯಾಯವೆಂದು ಮನವರಿಕೆಯಾಯಿತು. ಕೂಡಲೇ ನಮ್ಮನ್ನು ಬಿಡುಗಡೆಮಾಡಿ ಮರ್ಯಾದೆಯಿಂದ ಕರೆತರುವಂತೆ ಆಜ್ಞೆಮಾಡಿದನು.

ಉಪಾಧ್ಯಾಯ ಇದಿಷ್ಟು ಕಥೆಯನ್ನೂ ನಮಗೆ ಹೇಳಿದಮೇಲೆ ಟರಾರ ನಗುಮುಖವಾಗಿ ಎದ್ದು ಬಂದು ನಮ್ಮ ಕೈಕುಲುಕಿದ. ನಾವು ಕಿರಾತರ ಪದ್ಧತಿಗೆ ಮನ್ನಣೆಕೊಡಬೇಕೆಂದು ಅವನೊಡನೆ ಮೂಗು ಉಜ್ಜಿದೆವು! ಅಸಮಾಧಾನವೂ ದ್ವೇಷವೂ ಮಾಯವಾಗಿ ನಮಗೂ ಕಿರಾತರಿಗೂ ಮೊದಲಿಗಿಂತ ಗಾಢವಾದ ಸ್ನೇಹ ಏರ್ಪಟ್ಟಿತು.

ಟರಾರನಿಗೆ ನಮ್ಮಮೇಲಿನ ಅಭಿಮಾನವನ್ನು ಇನ್ನೂ ಸ್ಪಷ್ಟವಾಗಿ ತೋರಿಸಬೇಕೆಂಬ ಆಸೆ ಹುಟ್ಟಿತ್ತು. ಆದ್ದರಿಂದ ಆವತಿಯನ್ನು ಅವಳಿಗೆ ಇಷ್ಟನಾದ ವರನಿಗೇ ಕೊಟ್ಟು ಮದುವೆ ಮಾಡಬೇಕೆಂದು ನಿಶ್ಚಯಿಸಿ ಆ ನಾಯಕನಿಗೆ ಆಗಲೇ ವರ್ತಮಾನ ಕಳಿಸಿದ್ದನು.

ಮಾರನೆಯ ದಿನ ಆವತಿಯ ಪ್ರೇಮಿ ತನ್ನ ದೋಣಿಯಲ್ಲಿ ಬಂದಿಳಿದನು. ಟರಾರ ಅವನನ್ನೂ ಆವತಿಯನ್ನೂ ಒಟ್ಟಿಗೆ ಕರೆತಂದು ನಮಗೆ ಪರಿಚಯಮಾಡಿಸಿದ. ಆತನ ಕೃತಜ್ಞತೆಗಂತೂ ಮೇರೆಯೇ ಇರಲಿಲ್ಲ. ಜಾಕಿ ಅವನ ಕೈಕುಲುಕಿ ಗಂಡಹೆಂಡಿರು ಸುಖವಾಗಿ ಬಾಳಲೆಂದು ಹಾರೈಸಿದ.

ನಾವು ಬಂದ ಕೆಲಸವಾಯಿತು. ದಕ್ಷಿಣಸಾಗರಕ್ಕೆ ಪ್ರಯಾಣ ಮಾಡಿ ಅಲ್ಲಿ ಕೆಲವು ಕಾಲ ತಿರುಗಿದ್ದರಿಂಧ ನಮ್ಮ ಅನುಭವ ಎಷ್ಟೋ ವಿಶಾಲವಾಯಿತು. ಮನುಷ್ಯರ ಸ್ವಭಾವದ ವಿಷಯದಲ್ಲಿ ನಾವು ಬಹಳ ತಿಳಿವಳಿಕೆ ಸಂಪಾದನೆ ಮಾಡಿದೆವು. ನಮ್ಮ ಜನರಲ್ಲಿ ಕ್ಯಾಪ್ಟನ್ನರಂಥ ಮೋಸಗಾರರನ್ನೂ ಕ್ರೂರಿಗಳನ್ನೂ ಕಂಡು ನಾವು ಇವರಿಗಿಂತ ಕೀಳು ಅವರಿಗಿಂತ ಮೇಲು ಎಂಬ ದುರಭಿಮಾನ ಕಳೆದುಹೋಯಿತು. ಕೀಳು ಜನರೆಂದು ಭಾವಿಸಿದ್ದ ಕಿರಾತರಲ್ಲಿ ಎಷ್ಟು ಸದ್ಗುಣಗಳೂ ಕೃತಜ್ಞತೆಯೂ ಇವೆಯೆಂದು ತಿಳಿದುಕೊಂಡಹಾಗಾಯಿತು.

ಟರಾರನ ಇಷ್ಟದಂತೆ ಅವನೊಡನೆ ಎರಡುಮೂರು ದಿನ ನಿಂತು ಅನಂತರ ಹೊರಡಲು ಅವನ ಅಪ್ಪಣೆಯನ್ನು ಬೇಡಿದೆವು. ಅವನಿಗೆ ನಮ್ಮನ್ನು ಕಳುಹಿಸುವುದು ಇಷ್ಟವಿಲ್ಲದಿದ್ದರೂ ನಮಗೆ ಅನನುಕೂಲ ಪಡಿಸಬಾರದೆಂದು ಕಳಿಸಲೊಪ್ಪಿದನು. ಆ ದಿನ ನಮಗೆ ಭಾರಿ ಔತಣ. ಊಟವಾದಮೇಲೆ ವಿಶ್ರಾಂತಿ ತೆಗೆದುಕೊಂಡು ಮಧ್ಯಾಹ್ನ ಮೂರು ಘಂಟೆಯ ಹೊತ್ತಿಗೆ ಕಿರಾತರೆಲ್ಲರನ್ನೂ ಬೀಳ್ಕೊಂಡು ಹಡಗಿಗೆ ಹೊರಟೆವು. ನಮಗೆ ಸಹಾಯಮಾಡಿ ನಮ್ಮನ್ನು ಉಳಿಸುವುದಕ್ಕೆ ಮುಖ್ಯ ಕಾರಣನಾದ ಉಪಾಧ್ಯಾಯನೂ, ಟರಾರ, ಆವತಿ, ಅವಳ ಗಂಡ ಮೊದಲಾದವರೂ ಹಡಗಿನವರೆಗೆ ಬಂದು ನಮಗೆ ಸುಖಪ್ರಯಾಣವನ್ನು ಬಯಸಿದರು. ನಮ್ಮ ಹಡಗು ತೀರದಿಂದ ಸ್ವಲ್ಪ ದೂರ ಬಂದಮೇಲೂ ಅವರೆಲ್ಲರೂ ದಡದಲ್ಲಿ ನಿಂತು ಕೈ ಬೀಸುತ್ತಿದ್ದರು.

ಇನ್ನು ಮತ್ತೆ ನಮ್ಮ ದೇಶದ ಕಡೆಗೆ! ಹೊಸ ಸ್ನೇಹಿತರನ್ನು ಮರೆಯದೆ ಹಳೆಯ ಬಂಧುಗಳನ್ನೂ ಸ್ನೇಹಿತರನ್ನೂ ಕಾಣುವುದಕ್ಕೆ!

---

# ಹೊಸ ಪ್ರಕಟನೆಗಳು

....ಕಾವ್ಯಾಲಯದ ಪ್ರಕಟನೆ ಎಂದರೆ ಅದೇ ಒಂದು ಬಗೆ. ಸೊಗಸಾದ ಹಾಲುಕಾಗದದ ಮೇಲೆ ಮುದ್ದಾಗಿ ಮುದ್ರಿತವಾಗಿ, ಅಂದವಾದ ರಕ್ಷಾಪತ್ರದೊಡನೆ ಕಣ್ಣಿಗೆ ಆನಂದವನ್ನುಂಟುಮಾಡುವ ಹಾಗಿರುತ್ತದೆ. ಜೊತೆಗೆ ಕನ್ನಡ ನಾಡಿನ ಸಿದ್ಧ ಪ್ರಸಿದ್ಧ ಸಾಹಿತಿಗಳು ತಮ್ಮ ಅಮೂಲ್ಯ ಕೃತಿಗಳಿಂದ ಈ 'ಕಾವ್ಯಮಾಲೆ' ಯನ್ನು ಕಟ್ಟುತ್ತಿದ್ದಾರೆ.

—ದೇಶಬಂಧು.

| | | | | |
|---|---|---|---|---|
| **ಕುವೆಂಪು—** | | | | |
| ಬೆರಳ್‌ಗೆ ಕೊರಳ್ (ನಾಟಕ) | .... | ೧ | ೦ | ೦ |
| ಷೋಡಶಿ (ಪ್ರೇಮಗೀತೆಗಳು) | .... | ೧ | ೮ | ೦ |
| ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ | .... | ೦ | ೮ | ೦ |
| ನವಿಲು (ಕವನಸಂಗ್ರಹ) | ... | ೧ | ೪ | ೦ |
| ಕಲಾಸುಂದರಿ (ಕವನಸಂಗ್ರಹ) | .... | ೧ | ೮ | ೦ |
| **ರವೀಂದ್ರನಾಥಠಾಕೂರ್**—ಅನುವಾದ : ಡಾ॥ ಎ.ಎನ್. ನರಸಿಂಹಯ್ಯ | | | | |
| ಸಾಹಿತ್ಯ (ಪ್ರಬಂಧಗಳು) | .... | ೧ | ೮ | ೦ |
| **ತೀ. ನಂ. ಶ್ರೀಕಂಠಯ್ಯ—** | | | | |
| ಕಾವ್ಯ ಸಮೀಕ್ಷೆ (ವಿಮರ್ಶ ಲೇಖನಗಳು) | .... | ೨ | ೦ | ೦ |
| **ಪು. ತಿ. ನರಸಿಂಹಾಚಾರ್—** | | | | |
| ಗಣೇಶದರ್ಶನ (ಕವನಸಂಗ್ರಹ) | .... | ೧ | ೬ | ೦ |
| **ಆನಂದ—** | | | | |
| ಪಕ್ಷಿಗಾನ (ವಚನ ಚಿತ್ರಗಳು) | .... | ೧ | ೪ | ೦ |
| **ಎ. ಎನ್. ಮೂರ್ತಿರಾವ್—** | | | | |
| ಹವಳದ ದ್ವೀಪ (ಸಾಹಸ ಕಥೆ–ಅನುವಾದ) | .... | ೧ | ೬ | ೦ |
| **ಗೋಪಾಲಕೃಷ್ಣ ಅಡಿಗ—** | | | | |
| ಭಾವತರಂಗ (ಕವನಸಂಗ್ರಹ) | .... | ೧ | ೪ | ೦ |
| **ಎಸ್. ವಿ. ಪರಮೇಶ್ವರಭಟ್ಟ—** | | | | |
| ಕನ್ನಡ ಋತು ಸಂಹಾರ (ಶೃಂಗಾರ ಗೀತೆ) | .... | ೦ | ೧೨ | ೦ |
| **ಹೊಯಿಸಳ—** | | | | |
| ಪೋರಿ (ಮೂರು ಕಥೆಗಳು) | .... | ೦ | ೮ | ೦ |

ಕಾವ್ಯಾಲಯ * ಪ್ರಕಾಶಕರು * ಮೈಸೂರು